ಸಂಖ್ಯೆ: ಸಕಇ ೮೯ ಪಿಆರ್‌ಸಿಬಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ
ಬೆಂಗಳೂರು, ದಿನಾಂಕ: 12-10-2020

**ಇವರಿಂದ:-**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ,
ಬೆಂಗಳೂರು.

**ಇವರಿಗೆ:-**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ/ ~~ಪರಿಷತ್ತು~~,
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:-** ಮಾನ್ಯ ವಿಧಾನ ಸಭೆ/ ~~ಪರಿಷತ್~~ ಸದಸ್ಯರಾದ ಶ್ರೀ/ ~~ಶ್ರೀಮತಿ~~ ಬಸನಗೌಡ ಆರ್ ಪಾಟೀಲ ಇವರ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ: 89 / ~~ನಿಯಮ 72~~/ ~~ಗ.ಸೆ.ಸೂ-351~~ ಕ್ಕೆ ಉತ್ತರಿಸುವ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ/ ~~ಪರಿಷತ್~~ ಸದಸ್ಯರಾದ ಶ್ರೀ/ ~~ಶ್ರೀಮತಿ~~ ಬಸನಗೌಡ ಆರ್ ಪಾಟೀಲ ಇವರ ಚುಕ್ಕೆ ~~ಗುರುತಿನ~~/ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 89 / ~~ನಿಯಮ-73~~/ ~~ಗ.ಸೆ.ಸೂ-351~~ ಕ್ಕೆ ಸಂಬಂಧಿಸಿದ ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

Uma Mahesh B.G.

(ಉಮಾ ಮಹೇಶ್ವರಿ ಬಿ.ಜಿ)
ಶಾಖಾಧಿಕಾರಿ-ಸಿ
ಸಮಾಜ ಕಲ್ಯಾಣ ಇಲಾಖೆ.

# ಅನುಬಂಧ-1

## ಶ್ರೀ ಅಭಯ್ ಪಾಟೀಲ್ (ಬೆಳಗಾವಿ ದಕ್ಷಿಣ) ರವರ ಚುಕ್ಕೆಗುರುತ್ತಿಲ್ಲದ ಪ್ರ.ಸಂ:260 ಕ್ಕೆ ಉತ್ತರ

### 1. ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳು

1 ವಿದ್ಯಾರ್ಥಿ ನಿಲಯಗಳಿಗೆ ಪ್ರವೇಶ
2 ವಸತಿ ಶಾಲೆಗಳ ನಿರ್ವಹಣೆ
3 ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ
4 ಅನೈರ್ಮಲ್ಯ ವೃತ್ತಿಯಲ್ಲಿ ತೊಡಗಿರುವ ಪೋಷಕರ ಮಕ್ಕಳಿಗೆ ಪ್ರೋತ್ಸಾಹಧನ
5 ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ
6 ರಾಷ್ಟ್ರೀಯ ಸಂಸ್ಥೆಗಳಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಧನಸಹಾಯ
7 ಬುಕ್‌ಬ್ಯಾಂಕ್ ಯೋಜನೆ
8 ಪ್ರತಿಭಾ ಪುರಸ್ಕಾರ
9 ಪ್ರತಿಷ್ಠಿತ ಶಾಲೆಗಳಲ್ಲಿ ಪ್ರವೇಶಾವಕಾಶ
10 ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ಧನಸಹಾಯ

### 2. ಮೂಲಭೂತ ಸೌಕರ್ಯಗಳು

1 ಸಮುದಾಯ ಭವನಗಳ ನಿರ್ಮಾಣ
2 ಪರಿಶಿಷ್ಟ ಜಾತಿಯ ಕಾಲೋನಿಗಳಿಗೆ ಮೂಲಭೂತ ಸೌಕರ್ಯ
3 ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಧನಸಹಾಯ
4 ವಿಶ್ವವಿದ್ಯಾನಿಲಯಗಳಲ್ಲಿ ಸಂಶೋಧನಾ ಕೇಂದ್ರಗಳನ್ನು ಸ್ಥಾಪಿಸಲು ಧನಸಹಾಯ

### 3. ತರಬೇತಿ ಕಾರ್ಯಕ್ರಮ

1 ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಪರೀಕ್ಷಾ ಪೂರ್ವ ತರಬೇತಿ
2 ಜಿ.ಎನ್.ಎಂ. ಮತ್ತು ಬಿ.ಎಸ್.ಸಿ ನರ್ಸಿಂಗ್ ತರಬೇತಿ
3 ಕೌಶಲ್ಯಾಭಿವೃದ್ಧಿ ತರಬೇತಿ
4 ಕಾನೂನು ಪದವೀಧರರಿಗೆ ಶಿಷ್ಯವೇತನ

### 4. ಸಾಮಾಜಿಕ ಸಬಲೀಕರಣ ಕಾರ್ಯಕ್ರಮಗಳು

1 PCR Act 1955 (ನಾಗರಿಕ ಹಕ್ಕುಗಳ ಸಂರಕ್ಷಣೆ ಕಾಯ್ದೆ) ರ ಅನುಷ್ಠಾನ
ಅ) ಅಂತರ್‌ಜಾತಿ ವಿವಾಹವಾಗುವ ದಂಪತಿಗಳಿಗೆ ಪ್ರೋತ್ಸಾಹ ಧನ
ಆ) ಅಸ್ಪೃಶ್ಯತೆಯ ನಿವಾರಣೆಗಾಗಿ ಅರಿವು ಮೂಡಿಸುವ ಕಾರ್ಯಕ್ರಮ
2 POA Act 1989 ( ದೌರ್ಜನ್ಯ ತಡೆ ಅಧಿನಿಯಮ)ರ ಅನುಷ್ಠಾನ
ಅ) ದೌರ್ಜನ್ಯಕ್ಕೊಳಗಾದ ಸಂತ್ರಸ್ತರಿಗೆ ಪರಿಹಾರ

ಆ) ದೌರ್ಜನ್ಯಕ್ಕೊಳಗಾದ ಸಂತ್ರಸ್ತರಿಗೆ ಪುನರ್ವಸತಿ

3 ಸರಳ ವಿವಾಹ ಯೋಜನೆ

4 ವಿಧವಾ ಮರು ವಿವಾಹಕ್ಕೆ ಪ್ರೋತ್ಸಾಹಧನ

5 ಒಳ ಪಂಗಡಗಳ ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಾಹಧನ

6 ದೇವದಾಸಿಯರ ಮಕ್ಕಳ ವಿವಾಹಕ್ಕೆ ಪ್ರೋತ್ಸಾಹಧನ

## 5. ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳು

1 ಪರಿಶಿಷ್ಟ ಜಾತಿ/ ವರ್ಗದ ಉದ್ಯಮಿಗಳಿಗೆ ಬಡ್ಡಿ ಸಹಾಯಧನ ಕಾರ್ಯಕ್ರಮ

2 ಪರಿಶಿಷ್ಟ ಜಾತಿ/ವರ್ಗದ ಉದ್ಯಮಿಗಳಿಗೆ ಸಮಾನಾಂತರ ಖಾತರಿ ಯೋಜನೆ

3 ಪರಿಶಿಷ್ಟ ಜಾತಿ ಸಹಕಾರ ಸಂಘಗಳನ್ನು ಆರ್ಥಿಕವಾಗಿ ಸಬಲಗೊಳಿಸಲು ಷೇರುಬಂಡವಾಳ ಸಹಾಯಧನ ಕಾರ್ಯಕ್ರಮ.

## 6. ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳು:

### ಅ) ವಿದ್ಯಾರ್ಥಿನಿಲಯಗಳು/ವಸತಿ ಶಾಲೆಗಳ ನಿರ್ವಹಣೆ:

ಪ.ಪಂಗಡ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಪ್ರೋತ್ಸಾಹ ನೀಡಲು ಆಶ್ರಮ ಶಾಲೆ/ವಸತಿ ಶಾಲೆ/ವಿದ್ಯಾರ್ಥಿನಿಲಯಗಳನ್ನು ನಿರ್ವಹಣೆ ಮಾಡಲಾಗುತ್ತಿದೆ. ವಿವರ ಈ ಕೆಳಕಂಡಂತಿದೆ.

| ಕ್ರ.ಸಂ | ಸಂಸ್ಥೆಗಳ ವಿವರ | ಪ.ಪಂಗಡ |
|---|---|---|
| 1. | ಆಶ್ರಮ ಶಾಲೆ (1 ರಿಂದ 5ನೇ ತರಗತಿ) | 119 |
| 2. | ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯ | 136 |
| 3. | ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯ | 119 |
| 4. | ಅನುದಾನಿತ ವಿದ್ಯಾರ್ಥಿನಿಲಯ | 30 |
| | ಒಟ್ಟು: | 404 |

- 36623 ಪ.ಪಂಗಡದ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕಲ್ಪಿಸಿದೆ.

### ನಿಲಯಾರ್ಥಿಗಳಿಗೆ ಒದಗಿಸುತ್ತಿರುವ ಸೌಲಭ್ಯಗಳ ವಿವರ

(ರೂ.ಲಕ್ಷಗಳಲ್ಲಿ)

| ವಿವರ | ಆಶ್ರಮ ಶಾಲೆ | ಮೆ.ಪೂರ್ವ ವಿ.ನಿಲಯ | ಮೆ.ನಂತರ ವಿ.ನಿಲಯ | ವಸತಿ ಶಾಲೆ/ಕಾಲೇಜು |
|---|---|---|---|---|
| ಭೋಜನ ವೆಚ್ಚ (ಮಾಸಿಕ) | 1,300/- | 1,500/- | 1,600/- | 1,600/- |

### ಇತರೆ ಸೌಲಭ್ಯಗಳು

ಸಮವಸ್ತ್ರ (2ಜೊತೆ).ಪಠ್ಯ/ನೋಟ್ ಪುಸ್ತಕ. ಶುಚಿ ಸಂಭ್ರಮ ಕಿಟ್.ಶೂ. ಕ್ಷೌರ ವೆಚ್ಚ. ದಿನ ಪತ್ರಿಕೆ/Magazine, ವೈದ್ಯಕೀಯ ವೆಚ್ಚ. ಸ್ವಚ್ಛತೆ ವೆಚ್ಚ. ಮಂಚ. ಹಾಸಿಗೆ. ಹೊದಿಕೆ, ದಿಂಬು, ಜಮಖಾನ, ಕ್ರೀಡಾ ಸಾಮಗ್ರಿಗಳು ಹಾಗೂ ಇತರೆ ಮೂಲಭೂತ ಸೌಲಭ್ಯಗಳು.

### ವಿದ್ಯಾರ್ಥಿನಿಲಯ ಕಟ್ಟಡಗಳ ವಿವರ

| ಕ್ರ.ಸಂ | ವಿವರ | ಪ.ಪಂಗಡ |
|---|---|---|

| | | |
|---|---|---|
| 1. | ಒಟ್ಟು ವಿದ್ಯಾರ್ಥಿನಿಲಯಗಳ ಸಂಖ್ಯೆ | 374 |
| 2. | ಸ್ವಂತ ಕಟ್ಟಡಗಳ ಸಂಖ್ಯೆ | 277 |
| 3. | ಬಾಡಿಗೆ ಕಟ್ಟಡಗಳ ಸಂಖ್ಯೆ | 97 |
| 4. | ನಿರ್ಮಾಣ ಹಂತದಲ್ಲಿರುವ ಕಟ್ಟಡಗಳ ಸಂಖ್ಯೆ | 81 |
| 5. | ನಿವೇಶನ ಲಭ್ಯತೆ | 12 |
| 6. | ನಿವೇಶನ ರಹಿತ ವಿ.ನಿ ಸಂಖ್ಯೆ | 04 |

## ಆ) ವಿದ್ಯಾರ್ಥಿವೇತನ:

### ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ (ಡೇ ಸ್ಕಾಲರ್)

| ತರಗತಿ | ಬಾಲಕರು | ಬಾಲಕಿಯರು |
|---|---|---|
| 1 ರಿಂದ 5 | 1000/- | 1100/- |
| 6 ರಿಂದ 7 | 1150/- | 1250/- |
| 8ನೇ ತರಗತಿ | 1250/- | 1350/- |
| 9 ರಿಂದ 10 | 3000/- | 3000/- |

1. ವಾರ್ಷಿಕ ಸರಾಸರಿ 6 ಲಕ್ಷ ವಿದ್ಯಾರ್ಥಿಗಳಿಗೆ ರೂ.209.00 ಕೋಟಿ ವಿದ್ಯಾರ್ಥಿವೇತನ ನೀಡಲಾಗುತ್ತಿದೆ.
2. ರಾಜ್ಯ ಸರ್ಕಾರ 1 ರಿಂದ 8ನೇ ತರಗತಿ ವಿದ್ಯಾರ್ಥಿವೇತನಕ್ಕಾಗಿ ಅರ್ಜಿ ಸಲ್ಲಿಸಲು ಕುಟುಂಬದ ವಾರ್ಷಿಕ ಆದಾಯ ಮಿತಿಯನ್ನು ರೂ.6.00 ಲಕ್ಷಗಳಿಗೆ ನಿಗಧಿಪಡಿಸಲಾಗಿದೆ.
3. ಕೇಂದ್ರ ಸರ್ಕಾರ 9 ರಿಂದ 10ನೇ ತರಗತಿ ವಿದ್ಯಾರ್ಥಿವೇತನಕ್ಕಾಗಿ ಅರ್ಜಿ ಸಲ್ಲಿಸಲು ಕುಟುಂಬದ ವಾರ್ಷಿಕ ಆದಾಯ ಮಿತಿಯನ್ನು ರೂ.2.00 ಲಕ್ಷಗಳಿಗೆ ನಿಗಧಿಪಡಿಸಲಾಗಿದೆ.

### ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ (ವಾರ್ಷಿಕ)

| ಗುಂಪು | ಕೋರ್ಸ್‌ಗಳು | ಮಾಹೆಯಾನ | ನಿಲಯಾರ್ಥಿಗಳು | | | ಡೇಸ್ಕಾಲರ್ಸ್ | |
|---|---|---|---|---|---|---|---|
| | | | ಕೇಂದ್ರ | ರಾಜ್ಯ | ಒಟ್ಟು | ಮಾಹೆಯಾನ | ವಾರ್ಷಿಕ |
| I. | MBBS/BE/ALL PG courses/M.Phil/Phd etc | 1200 | 14400/- | 4800/- | 19200/- | 550 | 5500/- |
| II. | LLB/Paramedical Nursing Course/B.Pharm/Nursing Etc | 820 | 9840/- | 9360/- | 19200/- | 530 | 5300/- |
| III. | BA/B.Sc.B.Com and all Degree courses | 570 | 6840/- | 12360/- | 19200/- | 300 | 3000/- |
| IV. | PUC/ITI/DIPLOMA etc | 380 | 4560/- | 14640/- | 19200/- | 230 | 2300/- |

1. ಕೇಂದ್ರ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನಕ್ಕಾಗಿ ಅರ್ಜಿ ಸಲ್ಲಿಸಲು ಕುಟುಂಬದ ವಾರ್ಷಿಕ ಆದಾಯ ಮಿತಿಯನ್ನು ರೂ.2.50 ಲಕ್ಷಗಳಿಗೆ ನಿಗಧಿಪಡಿಸಲಾಗಿದೆ.
2. ರೂ.2.50 ಲಕ್ಷ ಆದಾಯ ಮಿತಿಯಿರುವ ಎಲ್ಲಾ ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿಯನ್ನು ಇಲಾಖೆಯಿಂದ ಭರಿಸಲಾಗುತ್ತಿದೆ.
3. ರೂ.2.50 ಲಕ್ಷದಿಂದ ರೂ.10.00 ಲಕ್ಷವರೆಗಿನ ಪೋಷಕರ ವಾರ್ಷಿಕ ಆದಾಯ ಮಿತಿಯೊಳಗಿನ ವೃತ್ತಿಪರ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ತಾಂತ್ರಿಕ ಮತ್ತು

ವೈದ್ಯಕೀಯ ಶಿಕ್ಷಣ ಇಲಾಖೆಯಿಂದ ಶೇಕಡ 50% ರಷ್ಟು ಶುಲ್ಕ ವಿನಾಯಿತಿ ಮಾಡಲಾಗುತ್ತಿದೆ.

**ಇ) ಪ್ರೋತ್ಸಾಹಧನ ಯೋಜನೆ: ಪ್ರಥಮ ಪ್ರಯತ್ನದಲ್ಲಿ ಪ್ರಥಮ ದರ್ಜೆ:**

| ಕೋರ್ಸಿನ ವಿವರ | | ಬಹುಮಾನದ ಮೊತ್ತ |
|---|---|---|
| ಎಸ್.ಎಸ್.ಎಲ್.ಸಿ | ಶೇ 60 ರಿಂದ ಶೇ 75 | 7500/- |
| | ಶೇ 75 ಕ್ಕಿಂತ ಮೇಲ್ಪಟ್ಟು | 15,000/ |
| ಪಿ.ಯು.ಸಿ/ ಡಿಪ್ಲೊಮ | | 20,000/- |
| ಪದವಿ | | 25,000/- |
| ಸ್ನಾತಕೋತ್ತರ ಪದವಿ | | 30,000/- |
| ವೃತ್ತಿಪರ ಪದವಿ (ವೈದ್ಯಕೀಯ/ತಾಂತ್ರಿಕ/ಕೃಷಿ/ಪಶುವೈದ್ಯಕೀಯ) | | 35,000/- |
| ವಿಶ್ವವಿದ್ಯಾಲಯ ಮಟ್ಟದಲ್ಲಿ PG Courses ವಿವಿಧ ವಿಷಯಗಳಲ್ಲಿ ಗಳಲ್ಲಿ 1 ರಿಂದ 5 ರ್‍ಯಾಂಕ್ ಪಡೆದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ | | 50,000/- |

**ಈ) ಪ್ರತಿಷ್ಠಿತ ಶಾಲೆಗಳಲ್ಲಿ ಪ್ರವೇಶಾವಕಾಶ:**

ರಾಜ್ಯ ಮಟ್ಟದ ಸಮಿತಿಯಿಂದ ಆಯ್ಕೆ ಮಾಡಲಾದ ಪ್ರತಿಷ್ಠಿತ ಶಾಲೆಗಳಿಗೆ ಪ್ರತಿಭಾವಂತ ಪ.ಪಂಗಡ ವಿದ್ಯಾರ್ಥಿಗಳನ್ನು ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಆಯ್ಕೆ ಸಮಿತಿ ಮೂಲಕ ಆಯ್ಕೆಗೊಂಡು ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ನೀಡಲಾಗುವುದು.

**ಉ) ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಉನ್ನತ ಶಿಕ್ಷಣ ಪಡೆಯಲು ಧನಸಹಾಯ:**

1. ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಸ್ನಾತಕೋತ್ತರ ಪದವಿ ಮತ್ತು ಪಿಹೆಚ್‌ಡಿ ವ್ಯಾಸಂಗ ಮಾಡುವ ಅರ್ಹ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿ. ಕೋರ್ಸ್ ಶುಲ್ಕ. ನಿರ್ವಹಣಾ ಭತ್ಯೆ. ಒಂದು ಬಾರಿಯ ಪ್ರಮಾಣ ವೆಚ್ಚ. ಪುಸ್ತಕಗಳ ವೆಚ್ಚ. ವೀಸಾ ವೆಚ್ಚ ಇತ್ಯಾಧಿಗಳನ್ನು ಇಲಾಖೆಯಿಂದ ಭರಿಸಲಾಗುತ್ತಿದೆ.
2. ವಾರ್ಷಿಕ ರೂ.8.00 ಲಕ್ಷ ಆದಾಯ ಮಿತಿಯೊಳಗಿರುವ ವಿದ್ಯಾರ್ಥಿಗಳಿಗೆ ಶಿಕ್ಷಣದ ಪೂರ್ಣ ವೆಚ್ಚ ಭರಿಸಲಾಗುತ್ತಿದೆ.
3. ವಾರ್ಷಿಕ ರೂ.8.00 ಲಕ್ಷದಿಂದ ರೂ.15.00 ಲಕ್ಷಗಳ ಆದಾಯ ಮಿತಿಯೊಳಗಿರುವ ವಿದ್ಯಾರ್ಥಿಗಳ 50% ವೆಚ್ಚವನ್ನು ಸರ್ಕಾರ ಭರಿಸುತ್ತಿದೆ.
4. ವಾರ್ಷಿಕ ರೂ.15.00 ಲಕ್ಷದಿಂದ ರೂ.25.00 ಲಕ್ಷಗಳ ಆದಾಯ ಮಿತಿಯೊಳಗಿರುವ ವಿದ್ಯಾರ್ಥಿಗಳಿಗೆ ಶೇ.33% ವೆಚ್ಚವನ್ನು ಸರ್ಕಾರ ಭರಿಸುತ್ತದೆ.
5. ವಾರ್ಷಿಕ ಸರಾಸರಿ ರೂ.2.50 ಕೋಟಿ ವೆಚ್ಚ ಮಾಡಲಾಗುತ್ತಿದೆ.

**ಊ) ರಾಷ್ಟ್ರೀಯ ಸಂಸ್ಥೆಗಳಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಧನಸಹಾಯ:**

ಐ.ಐ.ಟಿ/ಐ.ಐ.ಎಂ/ಐ.ಎಂ.ಐ/ಎನ್.ಐ.ಟಿ ಗಳಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿಗಳಿಗೆ ರೂ.2.00 ಲಕ್ಷ ಸಹಾಯಧನ ನೀಡಲಾಗುತ್ತಿದೆ.

ಸಿ.ಎ/ಐ.ಸಿ.ಡಬ್ಲ್ಯೂಎ/ಕಂಪನಿ ಸೆಕ್ರೆಟರಿ ಪರೀಕ್ಷೆಗಳಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಕ್ರಮವಾಗಿ ರೂ.50,000/- ಮತ್ತು ರೂ.1.00 ಲಕ್ಷಗಳನ್ನು ಮಂಜೂರು ಮಾಡಲಾಗುತ್ತಿದೆ.

**ಋ) ವಿದ್ಯಾವಂತ ಯುವಕ/ಯುವತಿಯರಿಗೆ ಶೈಕ್ಷಣಿಕ ಪ್ರೋತ್ಸಾಹಧನ ಮತ್ತು ನಿರುದ್ಯೋಗಿ ಜೀವನ ಭತ್ಯೆ:-**

ಪರಿಶಿಷ್ಟ ಪಂಗಡದವರಾದ ಜೇನು ಕುರುಬ ಹಾಗೂ ಕೊರಗ ಸಮುದಾಯದ ವಿದ್ಯಾವಂತ ಯುವಕ/ಯುವತಿಯರಿಗೆ ಶೈಕ್ಷಣಿಕ ಪ್ರೋತ್ಸಾಹಧನ ಮತ್ತು ನಿರುದ್ಯೋಗಿ ಜೀವನ ಭತ್ಯೆಯನ್ನು, ಮೈಸೂರು, ಚಾಮರಾಜನಗರ, ಕೊಡಗು, ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಮೂಲನಿವಾಸಿಗಳಾದ ಪರಿಶಿಷ್ಟ ಪಂಗಡಗಳಾದ ಜೇನುಕುರುಬ ಹಾಗೂ ಕೊರಗ ಸಮುದಾಯದ ಯುವಕ/ಯುವತಿಯರಿಗೆ ಶೈಕ್ಷಣಿಕ ಪ್ರೋತ್ಸಾಹಧನ ಮತ್ತು ನಿರುದ್ಯೋಗಿಗಳಿಗೆ ಜೀವನ ಭತ್ಯೆಗಳನ್ನು ನೀಡಲಾಗುತ್ತಿದೆ. ವಿವರ ಈ ಕೆಳಕಂಡಂತಿದೆ.

| ಕ್ರ. ಸಂ | ವಿದ್ಯಾರ್ಹತೆ | ಶೈಕ್ಷಣಿಕ ಪ್ರೋತ್ಸಾಹ ಧನ ವಾರ್ಷಿಕ ರೂ.ಗಳಲ್ಲಿ | ಮಾಸಿಕ ನಿರುದ್ಯೋಗಿ ಜೀವನ ಭತ್ಯೆ |
|---|---|---|---|
| 1 | ಎಸ್.ಎಸ್.ಎಲ್.ಸಿ | 10,000/- | 2,000/- |
| 2 | ಪಿ.ಯು.ಸಿ ಮತ್ತು ತತ್ಸಮಾನ ಕೋರ್ಸುಗಳಿಗೆ ಪ್ರತಿ ವರ್ಷಕ್ಕೆ | 12,000/- | 2,500/- |
| 3 | ಎಲ್ಲಾ ಪದವಿ ಕೋರ್ಸುಗಳ ಪ್ರತಿ ವರ್ಷಕ್ಕೆ | 15,000/- | 3,500/- |
| 4 | ಎಲ್ಲಾ ಸ್ನಾತಕೋತರ ಕೋರ್ಸ್‌ಗಳ ಪ್ರತಿ ವರ್ಷಕ್ಕೆ | 18,000/- | 4,500/- |

**ಎ) ಕೇಂದ್ರಿಯ ಅನುದಾನದಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮಗಳು:-**

ಕೇಂದ್ರ ಸರ್ಕಾರದ ಅನುದಾನದಿಂದ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಈ ಕೆಳಕಂಡ ಕಾರ್ಯಕ್ರಮಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. 1) ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ವಸತಿ ಶಾಲೆಗಳು, 2) ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ವಸತಿ ರಹಿತ ಶಾಲೆಗಳು, 3) 10 ಹಾಸಿಗೆಗಳ ಅಸ್ಪತ್ರೆ/ಡಿಸ್ಪೆನ್ಸರಿ, 4) ಸಂಚಾರಿ ಆರೋಗ್ಯ ಘಟಕ, 5) ವಿವಿಧ ವೃತ್ತಿಗಳಲ್ಲಿ ತರಬೇತಿ. ಸ್ವಯಂ ಸೇವಾ ಸಂಸ್ಥೆಗಳು ಮೇಲ್ಕಾಣಿಸಿದ ಯಾವುದೇ ಯೋಜನೆ ಹಮ್ಮಿಕೊಳ್ಳಬಯಸಿದ್ದಲ್ಲಿ, ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಿಕಳುಹಿಸಲಾಗುವುದು. ಕೇಂದ್ರ ಸರ್ಕಾರವು ಹಣ ಲಭ್ಯತೆಗನುಗುಣವಾಗಿ ಪ್ರಸ್ತಾವನೆಗಳಿಗೆ ಮಂಜೂರಾತಿ ನೀಡಲಾಗುವುದು.

**ಏ) ಪರಿಶಿಷ್ಟ ವರ್ಗದ ಆದಿವಾಸಿ ಪಂಗಡಕ್ಕೆ ಸೇರಿದ ಜೇನುಕುರುಬ ಮತ್ತು ಕೊರಗ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ:-**

ಪರಿಶಿಷ್ಟ ವರ್ಗದ ಆದಿವಾಸಿ ಪಂಗಡಕ್ಕೆ ಸೇರಿದ ಜೇನುಕುರುಬ ಮತ್ತು ಕೊರಗ ಜನಾಂಗಕ್ಕೆ ಸೇರಿದ 7ನೇ ತರಗತಿಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ರೂ.2,500/- ಮತ್ತು 10ನೇ ತರಗತಿಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ರೂ.5,000/- ಗಳ ಪ್ರೋತ್ಸಾಹ ಧನವನ್ನು ನೀಡಲಾಗುತ್ತಿದೆ.

## 7. ಮೂಲಭೂತ ಸೌಕರ್ಯ ಒದಗಿಸುವ ಕಾರ್ಯಕ್ರಮಗಳು:

**ಅ) ಪ.ಪಂಗಡದವರ ಕಾಲೋನಿಗಳಲ್ಲಿ:-**

ಹಾಡಿಗಳಲ್ಲಿ ಮೂಲಭೂತ ಸೌಕರ್ಯಗಳಾದ ಸಿ.ಸಿ ರಸ್ತೆ. ಚರಂಡಿ.ಕುಡಿಯುವ ನೀರು ಇತ್ಯಾದಿ ಸೌಲಭ್ಯಗಳನ್ನು ಕಲ್ಪಿಸಲಾಗುತ್ತಿದೆ.

**ಆ) ಗಿರಿಜನ ಉಪಯೋಜನೆ ಜಿಲ್ಲಾ ವಲಯದ ಕಾರ್ಯಕ್ರಮಗಳು:-**

ಈ ಯೋಜನೆಯಡಿಯಲ್ಲಿ ಪರಿಶಿಷ್ಟ ವರ್ಗದ ಜನರು ಹೆಚ್ಚಾಗಿ ವಾಸಿಸುವ ಗ್ರಾಮ/ಸ್ಥಳಗಳನ್ನು ಆಯ್ಕೆ ಮಾಡಿ ಅನುದಾನವನ್ನು ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು ಸರಬರಾಜು, ಚರಂಡಿ, ರಸ್ತೆ, ಸಮುದಾಯ ಭವನ, ಕಾಲೋನಿಗಳಿಗೆ ಸಂಪರ್ಕ ರಸ್ತೆ ನಿರ್ಮಾಣ ಕಾರ್ಯಗಳನ್ನು ಕೈಗೆತ್ತಿಕೊಂಡು ಸೌಲಭ್ಯಗಳನ್ನು ಒದಗಿಸಲಾಗುವುದು, ಹಾಗೂ ಪರಿಶಿಷ್ಟ ವರ್ಗದ ಜನರು ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಮತ್ತು ಸ್ವಯಂ ಉದ್ಯೋಗ ಹೊಂದಲು ಜಿಲ್ಲಾ ವಲಯದಲ್ಲಿ ವಿವಿಧ ಅಭಿವೃದ್ಧಿ ಇಲಾಖೆಗಳಾದ ಕೃಷಿ, ತೋಟಗಾರಿಕೆ, ಪಶು ಸಂಗೋಪನೆ, ರೇಷ್ಮೆ, ಸಹಕಾರ ಇಲಾಖೆ ಮುಂತಾದ ಇಲಾಖೆಗಳ ಮೂಲಕ ಸಹಾಯಧನವನ್ನು ಒದಗಿಸಿ ಸೌಲಭ್ಯಗಳನ್ನು ಕಲ್ಪಿಸಿಕೊಡಲಾಗುವುದು.

**ಇ) ಭಾರತ ಸಂವಿಧಾನ ಅನುಚ್ಛೇದ 275(1)ರಡಿ ಮೂಲಭೂತ ಸೌಕರ್ಯ ಒದಗಿಸುವುದು:-**

ಭಾರತ ಸಂವಿಧಾನ ಅನುಚ್ಛೇದ 275(1)ರಡಿ ಪರಿಶಿಷ್ಟ ವರ್ಗಗಳ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳಾದ ಸಿಮೆಂಟ್ ಕಾಂಕ್ರೀಟ್ ರಸ್ತೆ, ಚರಂಡಿ, ಕುಡಿಯುವ ನೀರು, ಬೀದಿ ದೀಪ ಮತ್ತು ಸಮುದಾಯಭವನ ನಿರ್ಮಾಣ ಇತ್ಯಾದಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

**ಈ) ಮೂಲನಿವಾಸಿ ಜನಾಂಗದ ಅಭಿವೃದ್ಧಿ ಯೋಜನೆ:-**

ರಾಜ್ಯದ ದಕ್ಷಿಣ ಕನ್ನಡ, ಉಡುಪಿ, ಕೊಡಗು, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಕೊರಗ ಮತ್ತು ಜೇನುಕುರುಬ ಜನಾಂಗವನ್ನು ಮೂಲನಿವಾಸಿ ಜನಾಂಗದವರೆಂದು ಗುರುತಿಸಲಾಗಿದೆ. ರಾಜ್ಯದಲ್ಲಿ ಕೊರಗ ಜನಾಂಗದವರ ಒಟ್ಟು ಸಂಖ್ಯೆ:16071 ಇದ್ದು, 3636 ಕುಟುಂಬಗಳು ಇರುತ್ತವೆ. ಆದರೆ ರೀತಿ ಜೇನುಕುರುಬರ ಜನಸಂಖ್ಯೆ 29828 ಇದ್ದು, 9831 ಕುಟುಂಬಗಳು ಇರುತ್ತವೆ. ಈ ಮೂಲನಿವಾಸಿ ಜನಾಂಗದವರ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರ ಮಂಜೂರು ಮಾಡುವ ಅನುದಾನದಲ್ಲಿ 1) ಜಮೀನು ಖರೀದಿ, ಜಮೀನು ಅಭಿವೃದ್ಧಿ ಹಾಗೂ ನೀರಾವರಿ ಸೌಲಭ್ಯ ಒದಗಿಸುವುದು. 2) ವಸತಿ ರಹಿತರಿಗೆ ನಿವೇಶನ ಖರೀದಿ, ವಾಸದ ಮನೆಗಳ ನಿರ್ಮಾಣ. 3) ಆರ್ಥಿಕ ಉನ್ನತಿ ಕಾರ್ಯಕ್ರಮಗಳು. 4) ವಾಸ ಸ್ಥಳಗಳಿಗೆ ಮೂಲಭೂತ ಸೌಲಭ್ಯಗಳಾದ ಸಂಪರ್ಕ ರಸ್ತೆ, ಚರಂಡಿ, ಕುಡಿಯುವ ನೀರು ಇತ್ಯಾದಿ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗುವುದು.

**ಉ) ಮೂಲನಿವಾಸಿ ಜನಾಂಗದವರಿಗೆ ವಸತಿ ಸೌಕರ್ಯ ಯೋಜನೆ:-**

ದಕ್ಷಿಣ ಕನ್ನಡ, ಉಡುಪಿ, ಕೊಡಗು, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಮೂಲನಿವಾಸಿ ಜನಾಂಗದವರಾದ ಕೊರಗ ಮತ್ತು ಜೇನುಕುರುಬ ಜನಾಂಗದವರಲ್ಲಿ ಮನೆ ಇಲ್ಲದವರಿಗೆ ಪ್ರತಿ ಮನೆಗೆ ರೂ.3.50 ಲಕ್ಷಗಳಲ್ಲಿ ಮನೆ ನಿರ್ಮಿಸಿ ಕೊಡುವ ಯೋಜನೆ ಹಮ್ಮಿಕೊಳ್ಳಲಾಗಿದೆ.

**ಊ) ಅನುಸೂಚಿತ ಬುಡಕಟ್ಟು ಮತ್ತು ಇತರೆ ಪಾರಂಪರಿಕ ಅರಣ್ಯ ವಾಸಿಗಳ (ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ಅಧಿನಿಯಮ 2006 ಮತ್ತು ನಿಯಮಗಳು 2008 – ಅನುಷ್ಠಾನಗೊಳಿಸುವ ಬಗ್ಗೆ:-**

ತಲಾತಲಾಂತರದಿಂದ ಅರಣ್ಯಗಳಲ್ಲಿ ವಾಸಿಸುತ್ತಿರುವ ಅನುಸೂಚಿತ ಬುಡಕಟ್ಟು ಮತ್ತು ಇತರೆ ಪಾರಂಪರಿಕ ಅರಣ್ಯ ವಾಸಿಗಳಿಗೆ ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡಲು ಈ ಕಾಯ್ದೆಯನ್ನು ಕೇಂದ್ರ ಸರ್ಕಾರವು ಜಾರಿಗೆ ತಂದಿರುತ್ತದೆ. ಈ ಕಾಯ್ದೆಯ ಪ್ರಕಾರ ನಿಗದಿಪಡಿಸಿದ ನಿಯಮಗಳ ಪ್ರಕಾರ ಅರ್ಹರಾದವರಿಗೆ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಜಿಲ್ಲಾ ಮಟ್ಟದ ಸಮಿತಿಯಲ್ಲಿ ಪರಿಶೀಲಿಸಿ ಅರ್ಹ ಅರಣ್ಯ ವಾಸಿಗಳಿಗೆ ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ ಹಕ್ಕು ಪತ್ರಗಳನ್ನು ನೀಡಲಾಗುತ್ತಿದೆ.

**8. <u>ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳು</u>**

**ಅ) ವಾಲ್ಮೀಕಿ/ಸಮುದಾಯ ಭವನಗಳನ್ನು ಈ ಕೆಳಗಿನ ಘಟಕ ವೆಚ್ಚದಲ್ಲಿ ನಿರ್ಮಿಸಲಾಗುತ್ತಿದೆ.**

- ಗ್ರಾಮ ಮಟ್ಟ (ರೂ.20.00 ಲಕ್ಷ)
- ಹೋಬಳಿ ಮಟ್ಟ (ರೂ.75.00 ಲಕ್ಷ)
- ತಾಲ್ಲೂಕು ಮಟ್ಟ (ರೂ.200.00 ಲಕ್ಷ)
- ಜಿಲ್ಲಾ ಮಟ್ಟ (ರೂ.400.00 ಲಕ್ಷ)
- ರಾಜ್ಯ ಮಟ್ಟ (ರೂ.500.00 ಲಕ್ಷ)

ಆ) ಪರಿಶಿಷ್ಟ ಪಂಗಡದ ಸಂಘ-ಸಂಸ್ಥೆಗಳು/ಧಾರ್ಮಿಕ ಸಂಸ್ಥೆಗಳ ವತಿಯಿಂದ ನಡೆಸಲಾಗುತ್ತಿರುವ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಶಾಲಾ/ ಕಾಲೇಜು/ ವಿದ್ಯಾರ್ಥಿನಿಲಯ/ ಸಮುದಾಯ ಭವನಗಳನ್ನು ನಿರ್ಮಿಸಲು (ರೂ.10.00 ಲಕ್ಷದಿಂದ ರೂ.50.00 ಲಕ್ಷಗಳವರೆಗೆ) ಧನಸಹಾಯ ನೀಡಲಾಗುತ್ತಿದೆ.

**ಇ) ಪರಿಶಿಷ್ಟ ವರ್ಗದ ಉದ್ಯಮಿಗಳಿಗೆ ಬಡ್ಡಿ ಸಹಾಯಧನ ಕಾರ್ಯಕ್ರಮ**

ಪ.ಪಂಗದ ಉದ್ಯಮಿಗಳಿಗೆ ಕೆ.ಎಸ್.ಎಫ್.ಸಿ ಮತ್ತು ರಾಷ್ಟ್ರೀಕೃತ/ ಡಿ.ಸಿ.ಸಿ ಬ್ಯಾಂಕ್‌ಗಳಿಂದ ನೀಡುವ ಸಾಲದ ಮೊತ್ತಕ್ಕೆ ಬಡ್ಡಿ ಸಹಾಯಧನ ಹಣವನ್ನು ಇಲಾಖೆಯಿಂದ ಒದಗಿಸಲಾಗುತ್ತಿದೆ.

- ಗರಿಷ್ಟ ಸಾಲದ ಮೊತ್ತ:ರೂ.10.00 ಕೋಟಿಗಳವರೆಗೆ
- ಸಾಲದ ಮರುಪಾವತಿ ಅವಧಿ: ಗರಿಷ್ಟ 10 ವರ್ಷ

**ಈ) ಪರಿಶಿಷ್ಟ ವರ್ಗಗಳ ಉದ್ಯಮಿಗಳಿಗೆ ಸಾಲ ಮಂಜೂರಾತಿಗೆ ಸಮಾನಾಂತರ ಖಾ (Collateral Security) ಒದಗಿಸುವುದು.**

ಕೆ.ಎಸ್.ಎಫ್.ಸಿ ಯಿಂದ ಪ.ಜಾತಿ/ಪ.ವರ್ಗದವರಿಗೆ ಮಂಜೂರು ಮಾಡಲು ಸಾಲಕ್ಕೆ ಗರಿಷ್ಠ ರೂ.2.00 ಕೋಟಿಗಳವರೆಗೆ (Collateral Security) ಸಮಾನಾಂತರ ಖಾತ್ರಿ ಯನ್ನು ಸರ್ಕಾರದಿಂದ ಒದಗಿಸಲಾಗುತ್ತಿದೆ.

**ಉ) ವಿಶೇಷ ಕೇಂದ್ರಿಯ ನೆರವಿನಡಿ 275(1) ರಡಿ ಗಿರಿಜನ ಉಪಯೋಜನೆ ಕಾರ್ಯಕ್ರಮ:-**

ವಿಶೇಷ ಕೇಂದ್ರಿಯ ನೆರವಿನಡಿ ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ಅನುದಾನದಿಂದ ಪರಿಶಿಷ್ಟ ವರ್ಗದವರಿಗೆ ಆರ್ಥಿಕ ಸ್ವಾಲಂಭನೆಗೊಳಿಸುವ ಸಲುವಾಗಿ ಸ್ವಯಂ ಉದ್ಯೋಗ, ಕೃಷಿ ಚಟುವಟಿಕೆ, ಹೈನುಗಾರಿಕೆ ಇತ್ಯಾದಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತದೆ.

**ಊ) ಮೂಲನಿವಾಸಿ ಜನಾಂಗದವರಿಗೆ ಪೌಷ್ಠಿಕ ಆಹಾರ ಯೋಜನೆ:-**

ರಾಜ್ಯದ ದಕ್ಷಿಣ ಕನ್ನಡ, ಉಡುಪಿ, ಕೊಡಗು, ಮೈಸೂರು, ಉತ್ತರ ಕನ್ನಡ ಚಾಮರಾಜನಗರ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ವಾಸಿಸುವ ಮೂಲನಿವಾಸಿ ಪಂಗಡವಾದ ಕೊರಗ ಮತ್ತು ಜೇನುಕುರುಬ ಹಾಗೂ ಇತರೆ ಪರಿಶಿಷ್ಟ ಪಂಗಡದವರಾದ ಕಾಡುಕುರುಬ, ಸೋಲಿಗ, ಯರವ, ಮಲೆಕುಡಿಯ, ಸಿದ್ಧಿ, ಗೌಡಲು ಮತ್ತು ಹಸಲರು ಜನಾಂಗದವರು ಅರಣ್ಯ ಮತ್ತು ಅರಣ್ಯದ ಅಂಚಿನಲ್ಲಿ ವಾಸಿಸುತ್ತಿದ್ದು, ಅವರಿಗೆ ಮಳೆಗಾಳದಲ್ಲಿ ಜೀವನ ನಿರ್ವಹಣೆಗೆ ತೊಂದರೆಯಾಗಿ, ಅಪೌಷ್ಠಿಕತೆಯಿಂದ ಬಳಲುವುದನ್ನು ತಪ್ಪಿಸಲು 45 ದಿನಗಳಿಗೊಮ್ಮೆ ವಾರ್ಷಿಕ ಆರು ಬಾರಿ ಪ್ರತಿ ಕುಟುಂಬಕ್ಕೆ 1)ಅಕ್ಕಿ/ರಾಗಿ/ಗೋಧಿ 8 ಕೆ.ಜಿ., 2) ತೊಗರಿಬೇಳೆ 3 ಕೆ.ಜಿ., 3) ಕಡಳೆಬೀಜ 1 ಕೆ.ಜಿ., 4) ಹೆಸರುಕಾಳು/ಹುರಳಿಕಾಳು/ಹಲಸಂದೆ ಕಾಳು 2 ಕೆ.ಜಿ., 4) ಎಣ್ಣೆ 2 ಲೀಟರ್., 5) ಸಕ್ಕರೆ/ಬೆಲ್ಲ 2 ಕೆ.ಜಿ., 6) ಮೊಟ್ಟೆ ತಿಂಗಳಿಗೆ 30 ನ್ನು ಹಾಗೂ 7) 1/2 ಕೆ.ಜಿ ನಂದಿನಿ ತುಪ್ಪ ಕೊಡಲಾಗುವುದು. ಈ ಆಹಾರ ಪದಾರ್ಥಗಳನ್ನು ಪಡಿತರ ಆಹಾರ ಧಾನ್ಯದ ಜೊತೆಗೆ ಹೆಚ್ಚುವರಿಯಾಗಿ ಉಚಿತವಾಗಿ ನೀಡಲಾಗುತ್ತಿದೆ.

**ಋ) ಪ್ರಗತಿ ಕಾಲೋನಿ**

ಪ್ರಗತಿ ಕಾಲೋನಿ ಯೋಜನೆ ರೂಪಿಸಿ ಪರಿಶಿಷ್ಟ ಪಂಗಡದ ಜನರು ಹೆಚ್ಚಿನ ಸಂಖ್ಯೆ ಯಲ್ಲಿ ವಾಸಿಸುತ್ತಿರುವ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯ ಹಂತ ಹಂತವಾಗಿ ಸಮಗ್ರವಾಗಿ ಅಭಿವೃದ್ಧಿ ಪಡಿಸಲು ಸರ್ಕಾರದ ಆದೇಶವಾಗಿದ್ದು, ಅದರಂತೆ ಕಾರ್ಯಕ್ರಮ ಅನುಷ್ಠಾನಗೊಳಿಸಲಾಗುತ್ತಿದೆ.

**4) <u>ತರಬೇತಿ ಮತ್ತು ಕೌಶಲ್ಯಾಭಿವೃದ್ಧಿ ಕಾರ್ಯಕ್ರಮಗಳು.</u>**

**ಅ) ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಪರೀಕ್ಷಾ ಪೂರ್ವ ತರಬೇತಿ:**

ಯು.ಪಿ.ಎಸ್.ಸಿ/ಕೆ.ಪಿ.ಎಸ್.ಸಿ/ ಬ್ಯಾಂಕಿಂಗ್ ಮುಂತಾದ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಹಾಜರಾಗುವ ಪ.ಪಂ ಅಭ್ಯರ್ಥಿಗಳಿಗೆ ನವದೆಹಲಿ, ಹೈದರಾಬಾದ್ ಹಾಗೂ ಕರ್ನಾಟಕದ ಪ್ರತಿಷ್ಠಿತ ತರಬೇತಿ ಸಂಸ್ಥೆಗಳ ಮೂಲಕ 3 ರಿಂದ 9 ತಿಂಗಳವರೆಗೆ ತರಬೇತಿ ನೀಡಲಾಗುತ್ತಿದೆ.

1. ತರಬೇತಿ ಶುಲ್ಕ ರೂ.50,000/-ದಿಂದ ರೂ.1.60 ಲಕ್ಷದವರಿಗೆ ಸಂಸ್ಥೆಗೆ ಪಾವತಿಸಲಾಗುತ್ತಿದೆ.
2. ಮಾಸಿಕ ಶಿಷ್ಯವೇತನ ರೂ.6,000/- ದಿಂದ ರೂ.10,000/- ದವರಿಗೆ ಪಾವತಿಸಲಾಗುತ್ತಿದೆ.

**ಆ) ನರ್ಸಿಂಗ್ ತರಬೇತಿ ಕಾರ್ಯಕ್ರಮಗಳು**

- ಜಿ.ಎನ್.ಎಂ. ಮತ್ತು ಬಿ.ಎಸ್.ಸಿ. ನರ್ಸಿಂಗ್ ಕೋರ್ಸ್‌ಗಳಲ್ಲಿ ಪ.ಪಂ ಅಭ್ಯರ್ಥಿಗಳಿಗೆ ತರಬೇತಿ ನೀಡಲು ಪ್ರತಿ ಅಭ್ಯರ್ಥಿಗೆ ವಾರ್ಷಿಕ ರೂ.35,000 ವೆಚ್ಚ ಭರಿಸಲಾಗುತ್ತಿದೆ.(ಕೋರ್ಸ್ ಫೀ, ಸಮವಸ್ತ್ರ, ಪುಸ್ತಕ.ಸೈಕ್ರಿಯಾಟ್ರಿಕ್ ಫೀ. ಶಿಷ್ಯವೇತನ)
- PB Bsc/Msc ನರ್ಸಿಂಗ್ ಕೋರ್ಸ್‌ಗಳಲ್ಲಿ ಪ.ಪಂ ಅಭ್ಯರ್ಥಿಗಳಿಗೆ ತರಬೇತಿ ನೀಡಲು ಪ್ರತಿ ಅಭ್ಯರ್ಥಿಗೆ ವಾರ್ಷಿಕ ರೂ.18,000 ವೆಚ್ಚ ಭರಸಲಾಗುತ್ತಿದೆ.
- ಪ್ಯಾರಾ ಮೆಡಿಕಲ್ ಕೋರ್ಸ್‌ಗಳಲ್ಲಿ ಪ.ಪಂ ಅಭ್ಯರ್ಥಿಗಳಿಗೆ ತರಬೇತಿ ನೀಡಲು ಪ್ರತಿ ಅಭ್ಯರ್ಥಿಗೆ ವಾರ್ಷಿಕ ರೂ.17,000 ವೆಚ್ಚ ಭರಿಸಲಾಗುತ್ತಿದೆ.

**ಇ) ಕಾನೂನು ಪದವೀಧರರಿಗೆ ಶಿಷ್ಯವೇತನ:**

ಪ.ಪಂ ಕಾನೂನು ಪದವೀಧರರಿಗೆ 2 ವರ್ಷಗಳ ಕಾಲ ಮಾಸಿಕ ರೂ.10,000/- ಶಿಷ್ಯವೇತನ ನೀಡಲಾಗುತ್ತಿದೆ. ವಾರ್ಷಿಕ ಸರಾಸರಿ 470 ಕಾನೂನು ಪದವೀಧರರು. ಸದರಿ ತರಬೇತಿ ಪಡೆಯುತ್ತಿದ್ದಾರೆ.

**5) <u>ಸಾಮಾಜಿಕ ಸಬಲೀಕರಣ ಕಾರ್ಯಕ್ರಮಗಳು</u>**

**ಅ) ಸರಳ ವಿವಾಹ:**

ಪರಿಶಿಷ್ಟ ಪಂಗಡದವರ ಅಭಿವೃದ್ಧಿಗಾಗಿ ಇಲಾಖಾ ಆದ್ಯತಾ ಕಾರ್ಯಕ್ರಮವಾದ ಸಾಮೂಹಿಕ ಸರಳ ಕಾರ್ಯಕ್ರಮದಡಿ ಪರಿಶಿಷ್ಟ ಪಂಗಡದ ದಂಪತಿಗಳು ಸಾಮೂಹಿಕ ಸರಳ ವಿವಾಹಗಳಲ್ಲಿ ಸರಳವಾಗಿ ವಿವಾಹ ಮಾಡಿಕೊಂಡ ದಂಪತಿಗಳಿಗೆ ರೂ.50,000/- ಪ್ರೋತ್ಸಾಹಧನವನ್ನು ನೀಡಲಾಗುತ್ತಿದೆ.

**ಆ) ವಿಧವಾ ವಿವಾಹ:**

ಈ ಕಾರ್ಯಕ್ರಮದಡಿ ಪರಿಶಿಷ್ಟ ಪಂಗಡದ ವಿಧವೆಯರು ಮರು ವಿವಾಹವಾದ್ದಲ್ಲಿ ಅಂತಹವರಿಗೆ ರೂ.3.00 ಲಕ್ಷಗಳ ಪ್ರೋತ್ಸಾಹಧನ ನೀಡಲಾಗುತ್ತಿದೆ.

**ಇ) ಒಳ ಪಂಗಡ ವಿವಾಹ:**

ಪರಿಶಿಷ್ಟ ಪಂಗಡದ ಯುವಕ/ಯುವತಿಯರು ಪರಿಶಿಷ್ಟ ಪಂಗಡದ ಒಳಗೆ ಅಂತರ್ಜಾತಿ ವಿವಾಹವಾದ್ದಲ್ಲಿ ಅಂತಹವರಿಗೆ ರೂ.2.00 ಲಕ್ಷಗಳ ಪ್ರೋತ್ಸಾಹಧನವನ್ನು ನೀಡಲಾಗುತ್ತಿದೆ.

**ಈ) ಅಂತರ್ಜಾತಿ ವಿವಾಹ:-**

ಪರಿಶಿಷ್ಟ ಪಂಗಡದ ಯುವಕ ಯುವತಿಯರು ಅನ್ಯಜಾತಿಯ ಯುವಕ/ಯುವತಿಯ ವಿವಾಹವಾದಲ್ಲಿ ಅಂತಹ ಪುರುಷರಿಗೆ ರೂ.2.00 ಲಕ್ಷ ಮತ್ತು ಮಹಿಳೆಯರಿಗೆ ರೂ.3.00 ಲಕ್ಷಗಳ ಪ್ರೋತ್ಸಾಹಧನ ನೀಡಲಾಗುವುದು.

6. **ಸ್ವಯಂ ಉದ್ಯೋಗ / ನೇರಸಾಲ**

ಸ್ವಯಂ ಉದ್ಯೋಗ ಯೋಜನೆಯಡಿ ಪರಿಶಿಷ್ಟ ಜಾತಿ ಯುವಕ ಯುವತಿಯರಿಗೆ ಹಣ್ಣು ಮತ್ತು ತರಕಾರಿಗಳನ್ನು ತಳ್ಳುವಗಾಡಿಯ ಮೂಲಕ ಮಾರಾಟ ಮಾಡಲು, ಹೈನುಗಾರಿಕೆ ಹಾಗೂ ಇತರೆ ಉದ್ದೇಶಗಳಿಗೆ ಘಟಕ ವೆಚ್ಚ ರೂ.0.50ಲಕ್ಷಗಳಲ್ಲಿ ಸಾಲ ಸೌಲಭ್ಯ ಕಲ್ಪಿಸಲಾಗುವುದು. ಘಟಕ ವೆಚ್ಚದ ಪೈಕಿ ರೂ25000/- ಸಹಾಯಧನ ಹಾಗೂ ರೂ.25000/- ಸಾಲ ಮೊತ್ತವಾಗಿರುತ್ತದೆ.

7. **ಉದ್ಯಮಶೀಲತಾ ಯೋಜನೆ (ಐ.ಎಸ್.ಬಿ) (ಬ್ಯಾಂಕುಗಳ ಸಹಯೋಗದಲ್ಲಿ)**

ಉದ್ಯಮ ಶೀಲತಾ ಅಭಿವೃದ್ಧಿ ಯೋಜನೆಯಡಿ ನಗರ ಪ್ರದೇಶದಲ್ಲಿ ಹಾಪ್‌ಕಾಮ್ಸ್ ಮಾದರಿಯಲ್ಲಿ ಹಣ್ಣು ಮತ್ತು ತರಕಾರಿ ಮಾರಾಟ ಮಾಡಲು ಮಳಿಗೆಗಳನ್ನು ಸ್ಥಾಪಿಸಲು ಮತ್ತು ಇತರೆ ಸ್ವಯಂ ಉದ್ಯೋಗ ಘಟಕಗಳ ಉದ್ದೇಶಕ್ಕೆ ಘಟಕ ವೆಚ್ಚದ ಶೇ.70ರಷ್ಟು ಅಥವಾ ಗರಿಷ್ಠ ಮಿತಿ ರೂ.1.00ಲಕ್ಷದವರೆಗೆ ಸಹಾಯಧನ ಉಳಿದ ಮೊತ್ತ ಬ್ಯಾಂಕ್ ಸಾಲ.

8. **ಮೈಕ್ರೊ ಕ್ರೆಡಿಟ್ (ಪ್ರೇರಣಾ)**

ಡಾ:ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ ಮಹಿಳೆಯರ ಆರ್ಥಿಕ ಸ್ವಾವಲಂಬನೆ ಮತ್ತು ಸಬಲೀಕರಣ ಉದ್ದೇಶಕ್ಕಾಗಿ "ಪ್ರೇರಣಾ ಯೋಜನೆ" ಗಳನ್ನು ಅನುಷ್ಠಾನಗೊಳಿಸಲು ಉದ್ದೇಶಿಸಿದೆ. ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿನ ಪರಿಶಿಷ್ಟ ಜಾತಿ ನಿರುದ್ಯೋಗಿ ಮಹಿಳೆಯರಿಗೆ ಗುಂಪು ಚಟುವಟಿಕೆಗಳ ಮೂಲಕ ಉತ್ಪಾದನಾ ಚಟುವಟಿಕೆಗಳನ್ನು ಆರಂಭಿಸಿ ಲಾಭಗಳಿಸಲು ಸ್ವಯಂ ಉದ್ಯೋಗ ಘಟಕಗಳನ್ನು ಆರಂಭಿಸಲು ನಿಗಮದಿಂದ ಸಹಾಯದನ ಮತ್ತು ಸಾಲ ನೀಡಲು ಅವಕಾಶ ಮಾಡಿಕೊಡಲಾಗುತ್ತದೆ.

ಆಯ್ಕೆಯಾದ ಕನಿಷ್ಟ 10 ಮಹಿಳೆಯರ ಸ್ವಸಹಾಯ ಗುಂಪನ್ನು ರಚಿಸುವುದು/ಹಾಲಿ ಅಸ್ತಿತ್ವದಲ್ಲಿರುವ ಮಹಿಳಾ ಸ್ವಸಹಾಯ ಗುಂಪಿಗೆ ಆರ್ಥಿಕ ಬೆಂಬಲವನ್ನು ನೀಡಲಾಗುವುದು. ಜಂಟಿ ಖಾತೆಯನ್ನು ಆರಂಭಿಸಿ ಉತ್ತಮ ಆದಾಯ ಗಳಿಸುವ, ಉತ್ಪಾದನಾ/ಸೇವಾಘಟಕ ಆರಂಭಿಸಲು ರೂ.2.50ಲಕ್ಷ ಘಟಕವೆಚ್ಚವನ್ನು ಮಂಜೂರು ಮಾಡಲಾಗುವುದು. ಪ್ರತಿ ಸದಸ್ಯರಿಗೆ ರೂ.25,000/-ದಂತೆ ಹಣವನ್ನು ನಿಗಮ ಭರಿಸುತ್ತದೆ. (ರೂ.15,000/- ಸಹಾಯಧನ ಮತ್ತು ರೂ.10,000/- ಬೀಜಧನ ಸಾಲ). ವ್ಯಾಪಾರ/ ಉತ್ಪಾದನೆ/ಸೇವಾ ಚಟುವಟಿಕೆಗಳಲ್ಲಿ ಗಳಿಸುವ ಆದಾಯವನ್ನು ಸಮಾನವಾಗಿ ಹಂಚಿಕೆ ಮಾಡಿಕೊಂಡು ಆರ್ಥಿಕ ಸ್ವಾವಲಂಬನೆಯನ್ನು ಹೊಂದುವುದು ಯೋಜನೆಯ ಮೂಲ ಉದ್ದೇಶವಾಗಿರುತ್ತದೆ.

9. **ಗಂಗಾ ಕಲ್ಯಾಣ ಯೋಜನೆ-ವೈಯಕ್ತಿಕ ನೀರಾವರಿ ಕೊಳವೆಬಾವಿ**

ಗಂಗಾ ಕಲ್ಯಾಣ ವೈಯಕ್ತಿಕ ನೀರಾವರಿ ಕೊಳವೆಬಾವಿ ಯೋಜನೆಯನ್ನು 1984ರಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯಡಿ 1ಆ ಎಕರೆಯಿಂದ 5.00 ಎಕರೆ ಜಮೀನು ಹೊಂದಿರುವ ಪರಿಶಿಷ್ಟ ಜಾತಿಯ ಸಣ್ಣ ಮತ್ತು ಅತೀ ಸಣ್ಣ ರೈತರ ಜಮೀನಿನಲ್ಲಿ ಕೊಳವೆಬಾವಿ ಕೊರೆಸಿ, ಪಂಪ್‌ಸೆಟ್ ಅಳವಡಿಸಿ ವಿದ್ಯುದ್ಧೀಕರಣಗೊಳಿಸಿ ನೀರಾವರಿ ಸೌಲಭ್ಯ ಕಲ್ಪಿಸಲಾಗುತ್ತಿದೆ.

ಮಲೆನಾಡು ಪ್ರದೇಶಗಳಾದ ಕೊಡಗು, ದಕ್ಷಿಣ ಕನ್ನಡ, ಉಡುಪಿ, ಕಾರವಾರ, ಚಿಕ್ಕಮಗಳೂರು, ಶಿವಮೊಗ್ಗ ಮತ್ತು ಹಾಸನ ಜಿಲ್ಲೆಗಳಲ್ಲಿ 1.00 ಎಕರೆ ಜಮೀನು ಹೊಂದಿರುವವರಿಗೂ ಸಹ ನೀರಾವರಿ ಸೌಲಭ್ಯ ಒದಗಿಸಲಾಗುತ್ತಿದೆ.

ಈ ಯೋಜನೆಯಡಿ ಕೋಲಾರ, ಚಿಕ್ಕಬಳ್ಳಾಪುರ, ಬೆಂಗಳೂರು(ಗ್ರಾ), ಬೆಂಗಳೂರು(ನಗರ), ತುಮಕೂರು ಮತ್ತು ರಾಮನಗರ ಜಿಲ್ಲೆಗಳಲ್ಲಿ ಅಂತರ್ಜಲ ಮಟ್ಟ ಕೆಳಗೆ ಕುಸಿದಿರುವುದರಿಂದ ಈ ಜಿಲ್ಲೆಗಳಲ್ಲಿ ಘಟಕ ವೆಚ್ಚ ರೂ 4.50 ಲಕ್ಷಕ್ಕೆ ಹೆಚ್ಚಿಸಲಾಗಿದ್ದು, ಇದರಲ್ಲಿ ರೂ. 4.00 ಲಕ್ಷ ಸಹಾಯಧನವಿದ್ದು, ಉಳಿದ ರೂ. 50,000/- ಅವಧಿಸಾಲವಾಗಿರುತ್ತದೆ. ಇತರೆ ಜಿಲ್ಲೆಗಳಲ್ಲಿ ಘಟಕ ವೆಚ್ಚ ರೂ. 3.50 ಲಕ್ಷ ನಿಗದಿಪಡಿಸಿದ್ದು, ಇದರಲ್ಲಿ ರೂ.3.00ಲಕ್ಷ ಸಹಾಯದನ ಮತ್ತು ರೂ.0.50 ಲಕ್ಷ ಅವಧಿಸಾಲವಾಗಿರುತ್ತದೆ. ಘಟಕ ವೆಚ್ಚದ ಪೈಕಿ ವಿದ್ಯುದ್ಧೀಕರಣಕ್ಕೆ ಘಟಕ ವೆಚ್ಚದ ಸಹಾಯಧನದ ಮಿತಿಯಲ್ಲಿ ಪ್ರತಿ ಕೊಳವೆಬಾವಿಗೆ ರೂ. 50,000/-ಗಳನ್ನು ಸಂಬಂಧಿಸಿದ ಎಸ್ಕಾಂಗಳಿಗೆ ಬಿಡುಗಡೆ ಮಾಡಲಾಗುವುದು.

10. **ಭೂ ಒಡೆತನ ಯೋಜನೆ**

ರಾಜ್ಯದಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಭೂರಹಿತ ಕೃಷಿ ಕಾರ್ಮಿಕರ ಕುಟುಂಬದ ಮಹಿಳೆಯರಿಗೆ ಮಾತ್ರ ಈ ಯೋಜನೆಯಡಿ ಸೌಲಭ್ಯವನ್ನು ನೀಡಲಾಗುತ್ತದೆ. ಸರ್ಕಾರದ ಆದೇಶ ಸಂಖ್ಯೆ:ಸಕಇ 148ಎಸ್‌ಡಿಸಿ2017, ಬೆಂಗಳೂರು, ದಿನಾಂಕ:20.04.2017 ರಂತೆ ಘಟಕ ವೆಚ್ಚ ಗರಿಷ್ಟ ರೂ.15.00ಲಕ್ಷ ಇದ್ದು, ಇದರಲ್ಲಿ ಶೇ.50 ಭಾಗ ಸಹಾಯಧನ ಹಾಗೂ ಶೇ.50 ಭಾಗ ಸಾಲದ ರೂಪದಲ್ಲಿ ಆರ್ಥಿಕ ನೆರವನ್ನು ನೀಡಲಾಗುವುದು. ರೂ.15.00ಲಕ್ಷ ಘಟಕ ವೆಚ್ಚದ ಮಿತಿಯಲ್ಲಿ ಕನಿಷ್ಠ 2 ಎಕರೆ ಖುಷ್ಕಿ ಅಥವಾ ಕನಿಷ್ಠ 1 ಎಕರೆ ತರಿ/ಭಾಗಾಯ್ತು ಜಮೀನುಗಳನ್ನು ಅಥವಾ ಬಾಗಾಯ್ತು ಅರ್ಧ ಎಕರೆಗೆ(20 ಗುಂಟೆ) ಕಡಿಮೆಯಲ್ಲದಂತೆ ಒದಗಿಸಲಾಗುವುದು. ಫಲಾನುಭವಿಯು ಸಾಲದ ಹಣವನ್ನು 10 ವಾರ್ಷಿಕ ಕಂತುಗಳಲ್ಲಿ ಮರುಪಾವತಿ ಮಾಡಬೇಕು. ಇದಕ್ಕೆ ಬಡ್ಡಿದರ ಶೇ.6 ವಿಧಿಸಲಾಗುತ್ತದೆ. ಜಮೀನನ್ನು ಮಾರಾಟ ಮಾಡುವವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗಕ್ಕೆ ಸೇರಿದವರಾಗಿರಬಾರದು. ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಸಮಿತಿಯು ದರ ನಿಗದಿಪಡಿಸುತ್ತದೆ.

ಭೂ ಒಡೆತನ ಯೋಜನೆಯಡಿ ಅವಧಿಸಾಲವನ್ನು ನಿಗಮದ ಷೇರು ಬಂಡವಾಳದಿಂದ ಮತ್ತು ಸಹಾಯಧನವನ್ನು ರಾಜ್ಯ ಸರ್ಕಾರವು ನಿಗಧಿಪಡಿಸಿದ ಅನುದಾನ ದಿಂದ ಭರಿಸಲಾಗುತ್ತಿದೆ. ಈ ಯೋಜನೆಯಡಿ ಫಲಾಪೇಕ್ಷಿಗಳಿಗೆ ಸೌಲಭ್ಯ ಕಲ್ಪಿಸಲು ವಿಧಾನಸಭಾ ಕ್ಷೇತ್ರವಾರು ಪರಿಶಿಷ್ಟ ಜಾತಿಯ ಜನಸಂಖ್ಯೆ ಆಧಾರದ ಮೇಲೆ ಮತ್ತು ಹಿಂದಿನ ವರ್ಷಗಳಲ್ಲಿ ಹೆಚ್ಚಿನ ಪ್ರಸ್ತಾವನೆಗಳು ಬಂದಿರುವ ಜಿಲ್ಲೆಗಳನ್ನು ಗಮನದಲ್ಲಿಟ್ಟುಕೊಂಡು ಜಿಲ್ಲಾವಾರು ಗುರಿಯನ್ನು ನಿಗದಿಪಡಿಸಲಾಗಿದೆ.

2018-19ನೇ ಸಾಲಿನಿಂದ ಬೆಂಗಳೂರು ನಗರ, ಗ್ರಾಮಾಂತರ, ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ಸೀಮಿತಗೊಂಡಂತೆ ಈ ಯೋಜನೆಯಡಿ ಘಟಕ ವೆಚ್ಚವನ್ನು ರೂ.15.00ಲಕ್ಷಗಳಿಂದ ರೂ.20.00ಲಕ್ಷಗಳಿಗೆ ಹೆಚ್ಚಿಸಲಾಗಿದೆ.

ಉಳಿದ ಜಿಲ್ಲೆಗಳಲ್ಲಿ ಘಟಕ ವೆಚ್ಚ ರೂ.15.00ಲಕ್ಷಗಳಿದ್ದು, ಇದರಲ್ಲಿ ಸಹಾಯಧನ ಮತ್ತು ಅವಧಿಸಾಲ 50:50ರ ಅನುಪಾದಲ್ಲಿರುತ್ತದೆ. ಅವಧಿ ಸಾಲಕ್ಕೆ ವಾರ್ಷಿಕ ಶೇ.6ರ ದರದಲ್ಲಿ ಬಡ್ಡಿ ವಿಧಿಸಲಾಗುವುದು. ಸಾಲ ಮತ್ತು ಬಡ್ಡಿಯನ್ನು 10 ವರ್ಷಗಳ ಅವಧಿಯಲ್ಲಿ ವಾರ್ಷಿಕ ಕಂತುಗಳಲ್ಲಿ ಮರುಪಾವತಿ ಮಾಡಬೇಕಾಗಿರುತ್ತದೆ.

11. **ಐರಾವತ ಯೋಜನೆ**

ಡಾ:ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮವು ಲಘು ವಾಹನ ಚಾಲನಾ ಪರವಾನಗಿ ಹೊಂದಿರುವ ಪರಿಶಿಷ್ಟ ಜಾತಿಯ ನಿರುದ್ಯೋಗಿ ವಿಧ್ಯಾವಂತ ಯುವಕ/ ಯುವತಿಯರಿಗೆ ಪ್ರವಾಸಿ ಟ್ಯಾಕ್ಸಿಗಳ ಮಾಲೀಕರನ್ನಾಗಿ ಮಾಡಿ "ಓಲಾ"/"ಉಬರ್/ಮೇರು" ಸಂಸ್ಥೆಗಳ ಸಹಯೋಗದಲ್ಲಿ ಅತಿ ಹೆಚ್ಚು ಆದಾಯ ಪಡೆಯುವ "ಐರಾವತ ಯೋಜನೆ" ಅನುಷ್ಟಾನಗೊಳಿಸಲು ಉದ್ದೇಶಿಸಿದೆ. ಕರ್ನಾಟಕ ರಾಜ್ಯ ಅಂತರಾಷ್ಟ್ರೀಯ ಮಟ್ಟದ ಪ್ರವಾಸಿಗರ ತಾಣವಾಗಿದ್ದು, ಈ ಯೋಜನೆಗೆ ಹೆಚ್ಚಿನ ಬೇಡಿಕೆ ಇರುತ್ತದೆ.

ಡಾ:ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ ಈ ಯೋಜನೆಗೆ ಗರಿಷ್ಟ ರೂ.೫.೦೦ಲಕ್ಷಗಳವರೆಗೆ ನಿಗಮದಿಂದ ಸಹಾಯಧನ ಒದಗಿಸಲಾಗುವುದು. ಉಳಿದ ಭಾಗ ಬ್ಯಾಂಕ್/ಹಣಕಾಸು ಸಂಸ್ಥೆ/ಫಲಾನುಭವಿಯ ವಂತಿಕೆಯಿಂದ ಭರಿಸಿ ಯೋಜನೆಯನ್ನು ಅನುಷ್ಟಾನ ಮಾಡಲಾಗುವುದು.

ಆಯ್ಕೆಯಾದ ಫಲಾನುಭವಿಗಳಿಗೆ "ಓಲಾ"/"ಉಬರ್/ಮೇರು" ಸಂಸ್ಥೆಗಳೊಂದಿಗೆ ಟೈ-ಅಪ್ ಮಾಡಿಕೊಂಡು ಬೇಡಿಕೆ ಇರುವ ಮುಖ್ಯ ನಗರ ಪ್ರದೇಶಗಳಾದ ರಾಜಧಾನಿ ಬೆಂಗಳೂರು, ಮೈಸೂರು, ಮಂಗಳೂರು, ಹುಬ್ಬಳ್ಳಿ, ಧಾರವಾಡ ಇನ್ನಿತರೇ ಜಿಲ್ಲಾ ಕೇಂದ್ರಗಳಲ್ಲಿ ವಾಹನ ಚಾಲನೆ ಮಾಡಲು ವ್ಯವಸ್ಥೆ ಮಾಡಿ, ಯೋಜನೆಯನ್ನು ರೂಪಿಸಲಾಗಿದೆ.

12. **ಸಮೃದ್ಧಿ ಯೋಜನೆ**

ಡಾ:ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮವು ಗ್ರಾಮೀಣ/ನಗರ ಪ್ರದೇಶಗಳಲ್ಲಿನ ಪರಿಶಿಷ್ಟ ಜಾತಿಯ ನಿರುದ್ಯೋಗಿ ಯುವಕ/ಯುವತಿಯರನ್ನು ಉದ್ಯಮ ಶೀಲರನ್ನಾಗಿಸಲು "ಸಮೃದ್ಧಿ ಯೋಜನೆ" ಅನುಷ್ಟಾನಗೊಳಿಸಲು ಉದ್ದೇಶಿಸಿದೆ. ಸದರಿ ಯೋಜನೆಯಡಿ ಪರಿಶಿಷ್ಟ ಜಾತಿಯ ನಿರುದ್ಯೋಗಿಗಳಿಗೆ ವಿವಿಧ ಸ್ವಯಂ ಉದ್ಯೋಗ ಘಟಕಗಳನ್ನು ಆರಂಭಿಸಲು ಹಾಗೂ ಲಾಭದಾಯಕವಾಗಿ ನಡೆಸಲು ಅಗತ್ಯವಾದ ಉದ್ಯಮಶೀಲತಾ ತರಬೇತಿ/ವೃತ್ತಿ ಕೌಶಲ್ಯ ತರಬೇತಿಯನ್ನು ನೀಡಿ ಮಾರುಕಟ್ಟೆ ವ್ಯವಸ್ಥೆಯೊಂದಿಗೆ ಘಟಕಗಳನ್ನು ಸೃಷ್ಟಿಸಲು ವ್ಯವಸ್ಥೆ ಮಾಡಲಾಗುವುದು. ಸದರಿ ಯೋಜನೆಯಡಿ ವಿವಿಧ ಉದ್ದೇಶಗಳಡಿ ಯೋಜನೆಗಳನ್ನು ರೂಪಿಸಲಾಗಿದೆ.

ಉತ್ತಮ ಮಾರುಕಟ್ಟೆ ಹೊಂದಿರುವ ಸರ್ಕಾರಿ ಮತ್ತು ಖಾಸಗಿ ಬ್ರಾಂಡೆಡ್ ಸಂಸ್ಥೆಗಳ ಸಹಯೋಗದಲ್ಲಿ ಫ್ರಾಂಚೈಸಿ/ಡೀಲರ್‌ಶಿಪ್ ವ್ಯವಸ್ಥೆಯೊಂದಿಗೆ ರಿಟೈಲ್ ವ್ಯಾಪಾರಿ ಮಳಿಗೆಗಳನ್ನು ಆರಂಭಿಸಲು ಅಗತ್ಯವಾದ ತಾಂತ್ರಿಕ ಬೆಂಬಲ ಹಾಗೂ ಆರ್ಥಿಕ ಬೆಂಬಲ ನೀಡಿ ಯಶಸ್ವಿ ಉದ್ದಿಮೆದಾರರನ್ನಾಗಿ ಮಾಡುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ. ಈಗಾಗಲೇ ಸರ್ಕಾರಿ ಮತ್ತು ಬ್ರಾಂಡೆಡ್ ಸಂಸ್ಥೆಗಳ ಜೊತೆ ಸರ್ಕಾರವು ಒಡಂಬಡಿಕೆ (ಎಂಓಯು) ಮಾಡಿಕೊಳ್ಳಲು ವ್ಯವಸ್ಥೆಯಾಗಿರುತ್ತದೆ. ಆಯ್ಕೆಯಾದ ಪ್ರತೀ ಫಲಾನುಭವಿಗೆ ಗರಿಷ್ಟ ರೂ.10.00ಲಕ್ಷಗಳವರೆಗೆ ಆರ್ಥಿಕ ಬೆಂಬಲ ಒದಗಿಸಲಾಗುತ್ತದೆ.

13. **ಉನ್ನತಿ ಯೋಜನೆ**

ಡಾ:ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮವು 2018-19ನೇ ಸಾಲಿನಲ್ಲಿ ಉನ್ನತಿ ಯೋಜನೆಯನ್ನು ಅನುಷ್ಟಾನಗೊಳಿಸುತ್ತದೆ. ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ ಪ್ರತಿಭಾವಂತ ಯುವಕ/ಯುವತಿಯರು ಸ್ಟಾರ್ಟ್‌ಅಪ್ ಉದ್ದಿಮೆಗಳನ್ನು ಆರಂಭಿಸಿದ್ದಲ್ಲಿ ಪ್ರಾರಂಭಿಕ ಆರ್ಥಿಕ ಸಮಸ್ಯೆಗಳಿಗೆ ಬೆಂಬಲವಾಗಿ ಆಯ್ಕೆಯಾಗುವ ಪ್ರತಿ ಅರ್ಹ ಉದ್ಯಮಿಗೆ

ರೂ.50.00ಲಕ್ಷಗಳವರೆಗೆ ಆರ್ಥಿಕ ಸಹಾಯ ಮಾಡುವುದು ಯೋಜನೆಯ ಉದ್ದೇಶವಾಗಿರುತ್ತದೆ. ಕರ್ನಾಟಕ ಸರ್ಕಾರದ ಐಟಿಬಿಟಿ ಇಲಾಖೆಯಲ್ಲಿ ಈಗಾಗಲೇ ಈ ಯೋಜನೆಯು ಅಸ್ತಿತ್ವದಲ್ಲಿದ್ದು, ಅದೇ ಮಾದರಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಪ್ರತಿಭಾವಂತ ಉದ್ಯಮಿಗಳಿಗೆ ಈ ಯೋಜನೆಯನ್ನು ವಿಸ್ತರಿಸಲಾಗುವುದು. ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಿ ಉನ್ನತ ಮಟ್ಟದ ಮೌಲ್ಯಮಾಪನ ಸಮಿತಿ ಮತ್ತು ಅಂತಿಮ ಆಯ್ಕೆ ಸಮಿತಿ ಮೂಲಕ ಫಲಾನುಭವಿ ಉದ್ಯಮಿಗಳನ್ನು ಆಯ್ಕೆ ಮಾಡಿ ಸೌಲಭ್ಯ ಒದಗಿಸಲಾಗುವುದು.

14. **ತರಬೇತಿ ಕಾರ್ಯಕ್ರಮಗಳು:**

1. ಪಾದರಕ್ಷೆ/ ಶೂ/ ಚರ್ಮ ವಸ್ತುಗಳ ತಯಾರಿಕೆಯಲ್ಲಿ ಕೌಶಲ್ಯ ಅಭಿವೃದ್ಧಿ ಮತ್ತು ಆದಾಯ ಗಳಿಕೆಗಾಗಿ ತರಬೇತಿ ಶಿಬಿರ.

ಉದ್ದೇಶ:

ಪಾದರಕ್ಷೆ/ಶೂ/ಚರ್ಮ ವಸ್ತುಗಳ ತಯಾರಿಕೆಯಲ್ಲಿ ಕೌಶಲ್ಯ ಅಭಿವೃದ್ಧಿಗೊಳಿಸುವುದು ಮತ್ತು ಗುಡಿ ಕೈಗಾರಿಕೆಗೆ ಉತ್ತೇಜನ ನೀಡುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ.

ವಿವರ:

- ಪಾದರಕ್ಷೆ/ ಶೂ / ಚರ್ಮ ವಸ್ತುಗಳ ತಯಾರಿಕೆಯಲ್ಲಿ 60 ದಿನಗಳ ಅವಧಿಗೆ ಉನ್ನತ ಮಟ್ಟದ ಕೌಶಲ್ಯ ಅಭಿವೃದ್ಧಿ ತರಬೇತಿ ನೀಡಲಾಗುವುದು.
- ಕರ್ನಾಟಕ ಚರ್ಮ ತಾಂತ್ರಿಕ ಸಂಸ್ಥೆಯ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನದಿಂದ ಪರಿಷ್ಕೃತ ಪಠ್ಯದ ಆಧಾರದ ಮೇಲೆ ಬಹುಪಯೋಗಿ ತರಬೇತಿಯನ್ನು ನೀಡಲಾಗುವುದು.
- ತರಬೇತಿ ನಂತರ ಗುಡಿ ಕೈಗಾರಿಕೆ ಪ್ರಾರಂಭಿಸಲು ಅವಶ್ಯವಿರುವ ರೂ. 22,000/- ಬೆಲೆ ಬಾಳುವ ಯಂತ್ರೋಪಕರಣಗಳನ್ನು ಅಂದರೆ ಒಂದು ಚರ್ಮ ಹೊಲಿಗೆ ಯಂತ್ರ ಮತ್ತು ಒಂದು ಉಪಕರಣ ಪೆಟ್ಟಿಗೆ ವಿತರಿಸಲಾಗುವುದು. ಅಲ್ಲದೆ ರೂ. 6000/- ಶಿಷ್ಯವೇತನ ನೀಡಲಾಗುವುದು.
- ಉದ್ಧೇಶಿತ ಗುಂಪು – 30 ಕುಶಲಕರ್ಮಿಗಳ ಒಂದು ತಂಡ.
- ತರಬೇತಿ ನೀಡಲು ಉದ್ಧೇಶಿಸಿರುವ ತಂಡಗಳ ಸಂಖ್ಯೆ ಒಂದು ಶಿಬಿರಕ್ಕೆ 30 ಕುಶಲಕರ್ಮಿಗಳಂತೆ 25 ಶಿಬಿರಗಳು.
- ತರಬೇತಿ ನಡೆಸಿಕೊಡಲು ಉದ್ಧೇಶಿಸಿರುವ ಒಟ್ಟು ಕುಶಲಕರ್ಮಿಗಳ ಸಂಖ್ಯೆ: 30 ಘಿ 25 = 750.
- ತರಬೇತಿಯ ಅವಧಿ – 60 ದಿನಗಳು.

| ಕ್ರಸಂ | ವಿವರಗಳು | ಪಾದರಕ್ಷೆ / ಚರ್ಮ ವಸ್ತುಗಳ ತರಬೇತಿ (ರೂ. ಲಕ್ಷಗಳಲ್ಲಿ) |
|---|---|---|
| 1. | 30 ಕುಶಲಕರ್ಮಿಗಳ ಒಂದು ತಂಡಕ್ಕೆ ತರಬೇತಿ ನೀಡಲು ಅವಶ್ಯವಿರುವ ಕಚ್ಚಾಮಾಲಿನ ವೆಚ್ಚ – ಪಾದರಕ್ಷೆ ತರಬೇತಿ (30 ಜೊತೆ ಪುರುಷರ /ಹೆಂಗಸರ ಪಾದರಕ್ಷೆ ಹಾಗೂ 15 ಜೊತೆ ಶೂಗಳು ) | 90000 |

| | | |
|---|---|---|
| | ಚರ್ಮ ವಸ್ತುಗಳ ತರಬೇತಿ (30–ಬೆಲ್ಟ್, 60–ಕೀ ಕೇಸ್, 60–ಲೇಡಿಸ್ ಪರ್ಸ್, 30–ವ್ಯಾನಿಟಿ ಬ್ಯಾಗ್, 30 ಜೆಂಟ್ಸ್ ವಾಲೆಟ್)ಸಸಸಸ | |
| 2. | ಕುಶಲಕರ್ಮಿಗಳ ಶಿಷ್ಯವೇತನ (60 ದಿನಗಳಿಗೆ) ರೂ. 6,000/- * 30) – ಶೇ. 75 ರಷ್ಟು ಹಾಜರಾತಿ ಕಡ್ಡಾಯ. | 180000 |
| 3. | ಒಬ್ಬ ಕುಶಲಕರ್ಮಿಗೆ ಒಂದು ಚರ್ಮ ಹೊಲಿಗೆ ಯಂತ್ರ ಒದಗಿಸುವ ವೆಚ್ಚ (ರೂ. 17,250/- * 30) ತೆರಿಗೆ ಹೊರತುಪಡಿಸಿ. | 517500 |
| 4. | ಪ್ರತಿ ಕುಶಲಕರ್ಮಿಗೆ ಆಧುನಿಕ ಸುಧಾರಿತ ಸಲಕರಣೆಗಳ ಕಿಟ್ ಒದಗಿಸುವ ವೆಚ್ಚ (ರೂ. 3,500/- * 30) | 121100 |
| 5. | ತರಬೇತಿ ಸಮಾಲೋಚಕರ ವೆಚ್ಚ  60 ದಿನಗಳಿಗೆ ಟಿ.ಎ & ಡಿ.ಎ ಸೇರಿ | 30000 |
| 6. | ಕುಶಲಕರ್ಮಿಗಳು ಒಪ್ಪುವ ಒಬ್ಬ ಹಿರಿಯ ಕುಶಲಕರ್ಮಿಯನ್ನು ಸಹಾಯಕ ಭೋದಕರನ್ನಾಗಿ ನೇಮಿಸಿಕೊಳ್ಳುವ ವೆಚ್ಚ | 10000 |
| 7. | ತರಬೇತಿ ಶಿಬಿರದಲ್ಲಿ ಸ್ವಚ್ಛತೆ ಕಾಪಾಡಲು ಒಬ್ಬ ಅನುಚರರ ವೆಚ್ಚ | 5000 |
| 8. | ಪ್ರಥಮ ಚಿಕಿತ್ಸಾ ಪೆಟ್ಟಿಗೆ ಅಳವಡಿಸುವ ವೆಚ್ಚ | 1000 |
| 9. | ತರಬೇತಿ ಶಿಬಿರದಲ್ಲಿ<br>ಅ. ಟೀ/ಕಾಫಿ (ರೂ. 10 * 30 * 60)<br>ಆ. ನೀರು ಒದಗಿಸುವ ವೆಚ್ಚ (ರೂ. 40 * 60)<br>(ನೀರಿನ ವೆಚ ಒಂದು ಕ್ಯಾನ್‌ಗೆ ರೂ. 40.00) | 20400 |
| 10. | ತರಬೇತಿ ಆಯೋಜಿಸುವ ವೆಚ್ಚ | 25000 |
| 11. | ಇತರೆ ವೆಚ್ಚ | 50000 |
| | ಒಟ್ಟು ವೆಚ್ಚ | 10,50,000/- |

ನಿಯಮಗಳು:

1. ಅರ್ಜಿದಾರರು/ ಕುಟುಂಬದ ಅವಲಂಭಿತ ಸದಸ್ಯರು ಸರ್ಕಾರಿ/ ಅರೆ ಸರ್ಕಾರಿ ಯಾವುದೇ ನೌಕರಿಯಲ್ಲಿ
   ಇರಬಾರದು.
2. ಒಂದು ಕುಟುಂಬದಲ್ಲಿ ಒಬ್ಬ ಕುಶಲಕರ್ಮಿಗೆ ಮಾತ್ರ ಅವಕಾಶ ನೀಡುವುದು (ಕುಟುಂಬ ಎಂದರೆ ಗಂಡ, ಹೆಂಡತಿ ಮತ್ತು ಮದುವೆಯಾಗದ ಮಕ್ಕಳು)
3. ಮಂಜೂರಾತಿ ಪಡೆದ ಫಲಾನುಭವಿಯು ಅನರ್ಹರೆಂದು ಕಂಡು ಬಂದಲ್ಲಿ ಮಂಜೂರಾತಿಯನ್ನು ಯಾವುದೇ ಹಂತದಲ್ಲಿ ರದ್ದುಪಡಿಸಲಾಗುತ್ತದೆ.

ಅನುಷ್ಠಾನ ವಿಧಾನ:

1. ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗುವುದು.
2. ನಿಗಮದ ವೆಬ್‌ಸೈಟ್ ತಿತಿತಿ.ಟಜಚಿಡಿ.ಛಿಜು,ಸಂಪರ್ಕಿಸಿ ಅರ್ಜಿಗಳನ್ನು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಆನ್‌ಲೈನ್‌ನಲ್ಲಿ ಅಪ್‌ಲೋಡ್ ಮಾಡಬಹುದು.
3. ಆನ್‌ಲೈನ್ ಅರ್ಜಿ ಸಲ್ಲಿಸಲು ಸಾಧ್ಯವಾಗದಿದ್ದಲ್ಲಿ ನಿಗಮದ ವೆಬ್‌ಸೈಟ್‌ನಲ್ಲಿ ಅರ್ಜಿಗಳನ್ನು ಡೌನ್‌ಲೋಡ್ ಮಾಡಿಕೊಂಡು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಸಂಬಂಧಪಟ್ಟ ಜಿಲ್ಲಾ ಸಂಯೋಜಕರ ಕಛೇರಿಯಲ್ಲಿ ಸಲ್ಲಿಸಬಹುದು.

4. ಕೊನೆಯ ದಿನಾಂಕದ ನಂತರ ನಿಗಮದ ಜಿಲ್ಲಾ ಸಂಯೋಜಕರು ಪರಿಶೀಲನೆ ಮಾಡಿ ಅರ್ಹ ಕುಶಲಕರ್ಮಿಗಳ ಪಟ್ಟಿ ಸಿದ್ಧಪಡಿಸಿ ಸಂಬಂಧಪಟ್ಟ ಕ್ಷೇತ್ರದ ಶಾಸಕರ ಗಮನಕ್ಕೆ ತಂದು ಜಿಲ್ಲಾ ಸಮಿತಿ ಮುಂದೆ ಮಂಡಿಸುವುದು.
5. ಜಿಲ್ಲಾ ಸಮಿತಿಯು ಜಂಟಿ ನಿರ್ದೇಶಕರು / ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರೊಂದಿಗೆ ಕಾರ್ಯ ನಿರ್ವಹಿಸುವುದು

   1) ಜಿಲ್ಲಾ ವ್ಯವಸ್ಥಾಪಕರು ಡಾ: ಅಂ.ಅ.ನಿ.ನಿ. – ಸದಸ್ಯರು
   2) ನಿಗಮದ ಜಿಲ್ಲಾ ಸಂಯೋಜಕರು – ಸದಸ್ಯ ಕಾರ್ಯದರ್ಶಿ
6. ಮೇಲಿನ ಸಮಿತಿಯು ಫಲಾನುಭವಿಗಳನ್ನು ಆಯ್ಕೆ ಮಾಡಿದ ನಂತರ ದೃಢೀಕರಣ ಪಡೆದು ನಿಗಮದ ಜಿಲ್ಲಾ ಸಂಯೋಜಕರು ಪಟ್ಟಿಯನ್ನು ಪ್ರಧಾನ ಕಛೇರಿಗೆ ಸಲ್ಲಿಸುವುದು.
7. ಆಯ್ಕೆ ಪಟ್ಟಿಗೆ ವ್ಯವಸ್ಥಾಪಕ ನಿರ್ದೇಶಕರ ಆಡಳಿತಾತ್ಮಕ ಅನುಮೋದನೆ ಪಡೆದು ಆಯ್ಕೆ ಪಟ್ಟಿಯನ್ನು ಸಂಬಂಧಿಸಿದ ಜಿಲ್ಲಾ ಘಟಕಗಳ ಸೂಚನಾ ಫಲಕದಲ್ಲಿ ಪ್ರಕಟಿಸುವುದು ನಂತರ ಯೋಜನೆಯನ್ನು ಅನುಷ್ಠಾನಗೊಳಿಸುವುದು.

2. ಮಾನವ ಸಂಪನ್ಮೂಲ ಅಭಿವೃದ್ಧಿ ಮತ್ತು ಕೌಶಲ್ಯವೃದ್ಧಿ ಯೋಜನೆ.

ಉದ್ದೇಶ:
ರಾಜ್ಯದಲ್ಲಿ ಚರ್ಮ ತಾಂತ್ರಿಕತೆಯಲ್ಲಿ ಮಾನವ ಸಂಪನ್ಮೂಲವನ್ನು ಅಭಿವೃದ್ಧಿಗೊಳಿಸುವುದು ತನ್ಮೂಲಕ ಚರ್ಮೋದ್ಯಮದ ಬೆಳವಣಿಗೆಗೆ ಸಹಕಾರಿಯಾಗುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ.
ವಿವರ:

- ಎಸ್.ಎಸ್.ಎಲ್.ಸಿ/ಪಿ.ಯು.ಸಿ ಉತ್ತೀರ್ಣ ಮತ್ತು ಪದವೀಧರರಾದ ಚರ್ಮ ಕುಶಲಕರ್ಮಿ ಕುಟುಂಬಗಳಿಗೆ ಸೇರಿದ ನಿರುದ್ಯೋಗಿ ಯುವಕರನ್ನು ಪಾದರಕ್ಷೆ ವಿನ್ಯಾಸ ಅಭಿವೃದ್ಧಿ ಮತ್ತು ಕೌಶಲ್ಯವೃದ್ಧಿ ಮತ್ತು ಮಾರುಕಟ್ಟೆ ಕೌಶಲ್ಯಗಳ ತರಬೇತಿಗಾಗಿ, ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರದಿಂದ ಸ್ಥಾಪಿಸಲ್ಪಟ್ಟ ಪ್ರತಿಷ್ಠಿತ ತರಬೇತಿ ಕೇಂದ್ರಗಳಾದ ಚೆನ್ನೈನಲ್ಲಿರುವ ಸಿ.ಎಫ್.ಟಿ.ಐ /ಸಿ.ಎಲ್.ಆರ್.ಐ/ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಫ್ಯಾಷನ್ ಟೆಕ್ನಾಲಜಿ / ಕರ್ನಾಟಕ ಚರ್ಮ ತಾಂತ್ರಿಕ ಸಂಸ್ಥೆ, ಬೆಂಗಳೂರು ಇಲ್ಲಿ ವಸತಿ ಸಹಿತ ಅಲ್ಪಾವಧಿ ಮತ್ತು ಧೀರ್ಘಾವಧಿ ಕೋರ್ಸ್‌ಗಳಿಗೆ ನಿಯೋಜಿಸಲಾಗುವುದು.
- ಪಿಜಿ ಹೈಯರ್ ಡಿಪ್ಲೋಮಾ ಇನ್ ಫುಟ್‌ವೇರ್ ಮ್ಯಾನುಫ್ಯಾಕ್ಚರಿಂಗ್ ಅಂಡ್ ಮ್ಯಾನೇಜ್‌ಮೆಂಟ್ ಸ್ಟಡೀಸ್ ಕೋರ್ಸ್, ಮೂರು ವರ್ಷದ ಡಿಪ್ಲೋಮಾ ಇನ್ ಲೆದರ್ ಟೆಕ್ನಾಲಜಿ, ಒಂದು ವರ್ಷದ ಡಿಪ್ಲಮೋ ಇನ್ ಫುಟ್‌ವೇರ್ ಡಿಸೈನ್ ಅಂಡ್ ಪ್ರೊಡಕ್ಷನ್ ಟೆಕ್ನಾಲಜಿ ಮತ್ತು ಫುಟ್‌ವೇರ್/ಲೆದರ್ ಗೂಡ್ಸ್ ತಯಾರಿಕೆಯಲ್ಲಿ ಒಂದು ವರ್ಷದ ಸರ್ಟಿಫಿಕೇಟ್ ಕೋರ್ಸ್‌ಗಳಿಗೆ ನಿಯೋಜಿಸಲಾಗುವುದು.
- ತರಬೇತಿಯ ಪೂರ್ಣ ವೆಚ್ಚ ನಿಗಮದಿಂದ ಭರಿಸಲಾಗುವುದು ಹಾಗೂ ತರಬೇತಿ ಅವಧಿಯಲ್ಲಿ ಶಿಷ್ಯವೇತನ ನೀಡಲಾಗುವುದು.

| ಕ್ರ.ಸಂ. | ವೆಚ್ಚದ ವಿವರ | ಮೊತ್ತ |
|---|---|---|
| 1. | 3 years Diploma course in Leather Technology<br>ಕೋರ್ಸ್ ಫೀ, ಊಟ & ವಸತಿ ಸೇರಿ<br>1) 2020-21: ಪ್ರತಿ ಅಭ್ಯರ್ಥಿಗೆ ರೂ. 72,780/- ಥ20<br>2) 2018-19 & 2019-20 ನೇ ಸಾಲಿನ ವಿದ್ಯಾರ್ಥಿಗಳ ಶುಲ್ಕ ಸೇರಿ<br>ಪ್ರತಿ ಅಭ್ಯರ್ಥಿಗೆ ರೂ. 72,780/- ಥ40<br><br>ಇತರೆ ವೆಚ್ಚಗಳು ಸೇರಿ | 15,28,380/-<br><br>30,56,760/- |
| | ಒಟ್ಟು | 45,85,140/- |

ನಿಯಮಗಳು:

1. ಆಯ್ಕೆಯಾದ ಅರ್ಜಿದಾರರು ತರಬೇತಿಯನ್ನು ಅರ್ಧದಲ್ಲೇ ಬಿಟ್ಟು ಹೋದಲ್ಲಿ, ಅಂತಹವರು ಖರ್ಚು ಮಾಡಿದ ಮೊತ್ತವನ್ನು ನಿಗಮಕ್ಕೆ ಹಿಂದಿರುಗಿಸುವುದು.
2. ಮಂಜೂರಾತಿ ಪಡೆದ ಫಲಾನುಭವಿಯು ಅನರ್ಹರೆಂದು ಕಂಡು ಬಂದಲ್ಲಿ ಆಯ್ಕೆಯನ್ನು (Admission) ಯಾವುದೇ ಹಂತದಲ್ಲಿ ರದ್ದುಪಡಿಸಲಾಗುತ್ತದೆ.

ಅನುಷ್ಠಾನ ವಿಧಾನ :

1. ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗುವುದು.
2. ನಿಗಮದ ವೆಬ್‌ಸೈಟ್ ತಿತಿತಿ.ಟಜಾಇಚಿಡಿ.ಛಿಡು.ಸಂಪರ್ಕಿಸಿ ಅರ್ಜಿಗಳನ್ನು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಆನ್‌ಲೈನ್‌ನಲ್ಲಿ ಅಪ್‌ಲೋಡ್ ಮಾಡಬಹುದು.
3. ಆನ್‌ಲೈನ್ ಅರ್ಜಿ ಸಲ್ಲಿಸಲು ಸಾಧ್ಯವಾಗದಿದ್ದಲ್ಲಿ ನಿಗಮದ ವೆಬ್‌ಸೈಟ್‌ನಲ್ಲಿ ಅರ್ಜಿಗಳನ್ನು ಡೌನ್‌ಲೋಡ್ ಮಾಡಿಕೊಂಡು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಸಂಬಂಧಪಟ್ಟ ಜಿಲ್ಲಾ ಸಂಯೋಜಕರ ಕಛೇರಿಯಲ್ಲಿ ಸಲ್ಲಿಸಬಹುದು.
4. ಕೊನೆಯ ದಿನಾಂಕದ ನಂತರ ನಿಗಮದ ಜಿಲ್ಲಾ ಸಂಯೋಜಕರು ಪರಿಶೀಲನೆ ಮಾಡಿ ಅರ್ಹ ಕುಶಲಕರ್ಮಿಗಳ ಪಟ್ಟಿ ಸಿದ್ಧಪಡಿಸಿ ಸಂಬಂಧಪಟ್ಟ ಕ್ಷೇತ್ರದ ಶಾಸಕರ ಗಮನಕ್ಕೆ ತಂದು ಜಿಲ್ಲಾ ಸಮಿತಿ ಮುಂದೆ ಮಂಡಿಸುವುದು.
5. ನಿರೀಕ್ಷಿತ ಸಂಖ್ಯೆಯಲ್ಲಿ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಜಿಲ್ಲಾ ಸಂಯೋಜಕರ ಕಛೇರಿ ಮಟ್ಟದಲ್ಲೇ / ನಿಯೋಜನೆ ಮಾಡುವ ಸಂಸ್ಥೆಗಳ ಮಟ್ಟದಲ್ಲೇ ಅಭ್ಯರ್ಥಿಗಳನ್ನು ಆಯ್ಕೆ ಮಾಡಬಹುದಾಗಿದೆ.
6. ನಿಗಮದ ತಾಂತ್ರಿಕ ವಿಭಾಗದಿಂದ ಆರ್ಹ ಅಭ್ಯರ್ಥಿಗಳ ಪಟ್ಟಿ ಸಿದ್ದಪಡಿಸಲಾಗುವುದು.

7. ನಂತರ ಗುರಿಗಿಂತ ಅಭ್ಯರ್ಥಿಗಳು ಹೆಚ್ಚಾಗಿದ್ದಲ್ಲಿ ಅಧಿಕಾರಿಗಳ ಸಮಿತಿಯಲ್ಲಿ ಅಭ್ಯರ್ಥಿಗಳನ್ನು ಸಂದರ್ಶನ ಮಾಡಿ ಅರ್ಹತೆ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.
8. ಆಯ್ಕೆ ಪಟ್ಟಿಗೆ ವ್ಯವಸ್ಥಾಪಕ ನಿರ್ದೇಶಕರ ಆಡಳಿತಾತ್ಮಕ ಅನುಮೋದನೆ ಪಡೆದು ಸಂಬಂಧಪಟ್ಟ ಸಂಸ್ಥೆಗಳಿಗೆ ನಿಯೋಜಿಸಲಾಗುವುದು.

15. **ಸ್ವಯಂ ಉದ್ಯೋಗ ಯೋಜನೆಗಳು.**

1. "ಚರ್ಮಶಿಲ್ಪ" ಯಂತ್ರಾಧಾರಿತ ಉತ್ಪಾದನಾ ಘಟಕ್ ಸ್ಥಾಪಿಸುವ ಯೋಜನೆ:

ಉದ್ದೇಶ:

ಪರಿಶಿಷ್ಟ ಜಾತಿಗೆ ಸೇರಿದ ಚರ್ಮ ಕುಶಲಕರ್ಮಿಗಳು ಅಥವಾ ಕುಶಲಕರ್ಮಿಗಳ ಸ್ವ-ಸಹಾಯ ಸಂಘಗಳು/ ಸಹಕಾರ ಸಂಘಗಳು ಪಾರಂಪರಿಕ ವಿಧಾನದಲ್ಲಿ (ಖಡಿಚಿಜಣಾಟಿಚಿಟ ಒಞಣಛಿಜ) ಪಾದರಕ್ಷೆಗಳನ್ನು/ಚರ್ಮ ವಸ್ತಗಳನ್ನು ತಯಾರಿಸುತ್ತಿದ್ದಾರೆ. ಇವರು ಮುಂದೆ ಬಂದಲ್ಲಿ ಯಂತ್ರಾಧಾರಿತ ಉತ್ಪಾದನಾ ಘಟಕಗಳನ್ನು ಸ್ಥಾಪಿಸಿಕೊಟ್ಟು ಸ್ವಯಂ ಉದ್ಯೋಗ ಕಲ್ಪಿಸುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ.

ವಿವರ:

ಚರ್ಮ ಕುಶಲಕರ್ಮಿಗಳು ಉತ್ತಮ ಗುಣಮಟ್ಟದ ಪಾದರಕ್ಷೆಗಳನ್ನು ತಯಾರಿಸಲು ಸಾಧ್ಯವಾಗದೆ ಮಾರುಕಟ್ಟೆಯಲ್ಲಿ ಲಭ್ಯವಿರುವ ಬಹುರಾಷ್ಟ್ರೀಯ ಕಂಪನಿಗಳು ಉತ್ಪಾದನೆ ಮಾಡುತ್ತಿರುವ ಪಾದರಕ್ಷೆಗಳು/ಚರ್ಮ ವಸ್ತುಗಳ ಜೊತೆ ಸ್ಪರ್ಧೆ ಮಾಡಲು ಸಾಧ್ಯವಾಗುತ್ತಿಲ್ಲ. ಇದರಿಂದ ಅವಶ್ಯವಿರುವ ಯಂತ್ರೋಪಕರಣಗಳನ್ನು ಖರೀದಿಸಿ ಅಳವಡಿಸುವುದಲ್ಲದೇ ನಿರಂತರ ತಾಂತ್ರಿಕ ಸಹಾಯ ಒದಗಿಸಿ ಉತ್ತಮ ಗುಣಮಟ್ಟದ ಉತ್ಪನ್ನಗಳನ್ನು ತಯಾರಿಸಲು ಉತ್ತೇಜನ ನೀಡಲಾಗುವುದು.
ನಿಗಮದ ವಿವಿಧ ಯೋಜನೆಗಳಡಿ ಪಾದರಕ್ಷೆ / ಚರ್ಮ ವಸ್ತುಗಳ ತಯಾರಿಕೆಯಲ್ಲಿ ತರಬೇತಿ ಪಡೆದ ವಿಶೇಷವಾಗಿ ಲೆದರ್ ಟೆಕ್ನಾಲಜಿಯಲ್ಲಿ ಡಿಪ್ಲಮೋ / ಒಂದು ವರ್ಷದ ಸರ್ಟಿಫಿಕೇಟ್ ಕೋರ್ಸ್ / ಪಿಜಿ ಹೈಯರ್ ಡಿಪ್ಲಮೋ ಇನ್ ಫುಟ್‌ವೇರ್ ಮ್ಯಾನುಫ್ಯಾಕ್ಚರಿಂಗ್ & ಮ್ಯಾನೇಜ್‌ಮೆಂಟ್ ಸ್ಟಡೀಸ್ ಈ ಕೋರ್ಸ್‌ಗಳನ್ನು ಪೂರ್ಣಗೊಳಿಸಿರುವ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

ಘಟಕ ವೆಚ್ಚ :

| ಕ್ರ.ಸಂ | ವಿವರಗಳು | ದರ (ರೂ. ಲಕ್ಷಗಳಲ್ಲಿ) |
|---|---|---|
| 1. | ಯಂತ್ರೋಪಕರಣಗಳು | 3.50 |
| 2. | ದುಡಿಮೆ ಬಂಡವಾಳ (ಕಚ್ಚಾಮಾಲು ಮತ್ತು ಲೇಬರ್ ಛಾರ್ಜಸ್) | 6.00 |
| 3. | ಇತರೆ ವೆಚ್ಚಗಳು | 0.50 |
| ಒಟ್ಟು | | 10.00 |

- ಇದರಲ್ಲಿ ರೂ. 5.00 ಲಕ್ಷ ಬ್ಯಾಂಕ್ ಸಾಲ ಮತ್ತು ನಿಗಮದಿಂದ ರೂ 5.00 ಲಕ್ಷಗಳ ಸಹಾಯಧನದ ರೂಪದಲ್ಲಿ ನೀಡಲಾಗುವುದು.
- ವೈಯಕ್ತಿಕ ಕುಶಲಕರ್ಮಿ ಘಟಕ ಕನಿಷ್ಟ ಕೆಳಕಂಡ ಸಾಮರ್ಥ್ಯ ಹೊಂದಿರಬೇಕು.
  1) ಕೆಲಸಗಾರರು : ಕುಶಲಕರ್ಮಿ- 01, ನುರಿತವರು- 02, ಅರೆ ನುರಿತವರು -02 ಒಟ್ಟು - 05.
  2)ಒಂದು ದಿನದ ಉತ್ಪಾದನೆ ಸಾಮರ್ಥ್ಯ 40 ಜೊತೆ ಶೂ ಅಥವಾ 50 ಜೊತೆ ಚಪ್ಪಲಿ.
  3)ಒಂದು ತಿಂಗಳ ಉತ್ಪಾದನೆ ಸಾಮರ್ಥ್ಯ 1000 ಜೊತೆ ಶೂ ಅಥವಾ 1250 ಜೊತೆ ಚಪ್ಪಲಿ.

ಅನುಷ್ಟಾನ ವಿಧಾನ:

1) ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗುವುದು.
2) ನಿಗಮದ ವೆಬ್‌ಸೈಟ್ ತಿತಿತಿ.ಟಜುಇಾಚಿಡಿ.ಛಿಡು ,ಸಂಪರ್ಕಿಸಿ ಅರ್ಜಿಗಳನ್ನು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಆನ್‌ಲೈನ್‌ನಲ್ಲಿ ಅಪ್‌ಲೋಡ್ ಮಾಡಬಹುದು.
3) ಆನ್‌ಲೈನ್ ಅರ್ಜಿ ಸಲ್ಲಿಸಲು ಸಾಧ್ಯವಾಗದಿದ್ದಲ್ಲಿ ನಿಗಮದ ವೆಬ್‌ಸೈಟ್‌ನಲ್ಲಿ ಅರ್ಜಿಗಳನ್ನು ಡೌನ್‌ಲೋಡ್ ಮಾಡಿಕೊಂಡು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಸಂಬಂಧಪಟ್ಟ ಜಿಲ್ಲಾ ಸಂಯೋಜಕರ ಕಛೇರಿಯಲ್ಲಿ ಸಲ್ಲಿಸಬಹುದು.
4) ಕೊನೆಯ ದಿನಾಂಕದ ನಂತರ ನಿಗಮದ ಜಿಲ್ಲಾ ಸಂಯೋಜಕರುಗಳನ್ನೊಳಗೊಂಡಂತೆ ಸಂಬಂಧಪಟ್ಟ ನೋಡಲ್ ಅಧಿಕಾರಿಗಳು ಮತ್ತು ವ್ಯವಸ್ಥಾಪಕರು (ತಾಂತ್ರಿಕ) ಇವರುಗಳನ್ನೊಳಗೊಂಡ ಸಮಿತಿಯು ಪೂರ್ಣ ಪರಿಶೀಲನೆ ನಂತರ ಉದ್ದೇಶಿತ ಫಲಾಪೇಕ್ಷಿಗಳ ವಿವರಗಳನ್ನು ಪಟ್ಟಿ ಮಾಡಿ ಜಿಲ್ಲಾ ಆಯ್ಕೆ ಸಮಿತಿಗೆ ಶಿಫಾರಸ್ಸು ಮಾಡುವುದು.
5) ಜಿಲ್ಲಾ ಆಯ್ಕೆ ಸಮಿತಿಯು ನಿಗಧಿಪಡಿಸಿದ ಗುರಿಗೆ ಅನುಸಾರ ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡುವುದು.
6) ಕುಶಲಕರ್ಮಿಗಳು ಅಥವಾ ಕುಶಲಕರ್ಮಿಗಳ ಸ್ವ-ಸಹಾಯ / ಸಹಕಾರ ಸಂಘಗಳು ಸ್ವತಃ ವಂತಿಗೆ ಭರಿಸುವುದಾದಲ್ಲಿ ಅರ್ಜಿಯೊಂದಿಗೆ ವಿವರಗಳನ್ನು ಪ್ರಧಾನ ಕಛೇರಿಗೆ ಸಲ್ಲಿಸುವುದು.
7) ಜಿಲ್ಲಾ ಆಯ್ಕೆ ಸಮಿತಿಯ ಅನುಮೋದನೆ ನಂತರ ನಿಗಮವು ಸಿ.ಎಫ್.ಟಿ.ಐ ಚೆನ್ನೈ ಅಥವಾ ಸಿ.ಎಲ್.ಆರ್.ಐ ಚೆನ್ನೈ ಅಥವಾ ಕಿಲ್ಟ್, ಬೆಂಗಳೂರು ರವರ ತಾಂತ್ರಿಕ ಸಹಯೋಗದೊಂದಿಗೆ ಯಂತ್ರೋಪಕರಣಗಳನ್ನು ಮತ್ತು ಕಚ್ಚಾಮಾಲುಗಳನ್ನು ಟೆಂಡರ್ ಮೂಲಕ ಖರೀದಿಸಿ ಉತ್ಪಾದನಾ ಘಟಕಗಳನ್ನು ಸ್ಥಾಪಿಸಲು ಕ್ರಮ ವಹಿಸುವುದು.
8) ಈ ರೀತಿ ಸ್ಥಾಪಿಸಿದ ಘಟಕಗಳ ನಿರಂತರ ಉಸ್ತುವಾರಿಗಾಗಿ ನಿಗಮದಿಂದ ಒಬ್ಬ ತಾಂತ್ರಿಕ ಸಮನ್ವಯಕಾರರನ್ನು(Technical Co-ordinator) ನೇಮಿಸುವುದು.
9) ಸ್ಥಾಪನೆಯಾದ ಉತ್ಪಾದನಾ ಘಟಕಗಳಿಗೆ ನಿರಂತರ ಉದ್ಯೋಗ ಒದಗಿಸುವ ನಿಟ್ಟಿನಲ್ಲಿ ನಿಗಮದ ಮಾರುಕಟ್ಟೆ ಸಹಾಯ ಯೋಜನೆಯಡಿ ಅಳವಡಿಸಿಕೊಂಡು ಲಿಡ್‌ಕರ್ ಮಾರಾಟ ಮಳಿಗೆಗಳಿಗೆ ಮತ್ತು ಸಗಟು ಮಾರಾಟಕ್ಕೆ ಅವಶ್ಯವಿರುವ ಉತ್ಪನ್ನಗಳನ್ನು ಈ ಘಟಕಗಳ ಮೂಲಕ ಉತ್ಪಾದನೆ ಮಾಡಿಸಿ ಸರಬರಾಜು ಮಾಡುವುದು.
10)ಆಜುಜಾಜ 10ಐು ಙಾಣ.
11) ಸ್ವತಃ ಮಾರುಕಟ್ಟೆ ವ್ಯವಸ್ಥೆ ಕಲ್ಪಿಸಿಕೊಳ್ಳಲು ಅವಕಾಶ ನೀಡುವುದು.

2. "ಸ್ವಾವಲಂಬಿ"/"ಸಂಚಾರಿ" ಮಾರಾಟ ಮಳಿಗೆ ಯೋಜನೆ.

ಉದ್ದೇಶ:

ಚರ್ಮ ಕುಶಲಕರ್ಮಿ ಕುಟುಂಬದ ಅಕ್ಷರಸ್ಥ ಯುವಕ/ ಯುವತಿಯರು ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲ ಮಾಡಿಕೊಡುವ ಉದ್ದೇಶ ಹೊಂದಲಾಗಿದೆ.

ವಿವರ:

- ಚರ್ಮಕಾರರ ಸಮುದಾಯಕ್ಕೆ ಸೇರಿದ ಅಕ್ಷರಸ್ಥ, ನಿರುದ್ಯೋಗಿ, ಯುವಕ/ಯುವತಿಯರಿಗೆ ಸ್ವಯಂ ಉದ್ಯೋಗ ಕಲ್ಪಿಸುವ ದೃಷ್ಟಿಯಿಂದ ವೈಯಕ್ತಿಕ/ಕುಶಲಕರ್ಮಿಗಳ ಸಹಕಾರ ಸಂಘ/ ಸ್ವ-ಸಹಾಯ ಸಂಘಗಳು ಈ ಕೆಳಕಂಡ ಯೋಜನೆಗಳಡಿ ಆರ್ಥಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳಬಹುದಾಗಿದೆ.
- "ಸ್ವಾವಲಂಬಿ": ಪಾರಂಪರಿಕ ಚರ್ಮ ಕುಶಲಕರ್ಮಿಗಳು ಅವರು ತಯಾರಿಸಿದ ಚರ್ಮೋತ್ಪನ್ನಗಳನ್ನು ಗ್ರಾಹಕರಿಗೆ ನೇರವಾಗಿ ಮಾರಾಟ ಮಾಡಲು ಮತ್ತು ವಿವಿಧ ಬ್ರಾಂಡ್‌ಗಳ ಪಾದರಕ್ಷೆ/ಶೂ ಮತ್ತು ಇತರೆ ಉತ್ಪನ್ನಗಳನ್ನು ಮಾರಾಟ ಮಾಡಲು ಸ್ವಂತ ಮಾರಾಟ ಮಳಿಗೆ ಪ್ರಾರಂಭಿಸಿ ಸ್ವಾವಲಂಬಿ ಜೀವನವನ್ನು ಕಲ್ಪಿಸುವ ಉದ್ದೇಶ ಹೊಂದಿದೆ.
- "ಸಂಚಾರಿ": ಪಾರಂಪರಿಕ ಚರ್ಮ ಕುಶಲಕರ್ಮಿಗಳು ಅವರು ತಯಾರಿಸಿದ ಚರ್ಮೋತ್ಪನ್ನಗಳನ್ನು / ಇತರೆ ಸಂಬಂಧಿತ ಉತ್ಪನ್ನಗಳನ್ನು ಸಂಚಾರಿ ವಾಹನದ ಮೂಲಕ ಗ್ರಾಹಕರ ಮನೆ ಬಾಗಿಲಿಗೆ ಹೋಗಿ ಮಾರಾಟ ಮಾಡಲು ಅವಕಾಶ ಕಲ್ಪಿಸಿ ಸ್ವಯಂ ಉದ್ಯೋಗ ಒದಗಿಸುವ ಉದ್ದೇಶ ಹೊಂದಿದೆ.
- ಈ ಚಟುವಟಿಕೆಗಳ ಮೂಲಕ ಕುಶಲಕರ್ಮಿಗಳು ತಯಾರಿಸಿದ ಉತ್ಪನ್ನಗಳನ್ನು ನೇರವಾಗಿ ಗ್ರಾಹಕರಿಗೆ ತಲುಪಿಸುವ ವ್ಯವಸ್ಥೆ ಕಲ್ಪಿಸಿದಂತಾಗುತ್ತದೆ.
- ಮೇಲಿನ ಆರ್ಥಿಕ ಚಟುವಟಿಕೆಗಳನ್ನು ಅನುಷ್ಠಾನಗೊಳಿಸಲು ಬ್ಯಾಂಕ್ ಸಾಲ ಪಡೆದಲ್ಲಿ ಆಯಾ ಪ್ರದೇಶಗಳಿಗೆ ಅನ್ವಯವಾಗುವಂತೆ ಮತ್ತು ಘಟಕ ವೆಚ್ಚದ ಆಧಾರದ ಮೇಲೆ ಗರಿಷ್ಠ ರೂ. 5.00 ಲಕ್ಷಗಳವರೆಗೂ ಸಹಾಯಧನ ನೀಡಲಾಗುವುದು.
- 2020-21 ನೇ ಸಾಲಿನಲ್ಲಿ ಒಟ್ಟು 90 ಫಲಾನುಭವಿಗಳಿಗೆ ಸೌಲಭ್ಯ ನೀಡುವ ಗುರಿ ಹೊಂದಲಾಗಿದ್ದು, ರೂ. 325.50 ಲಕ್ಷಗಳ ಅನುದಾನವನ್ನು ಕಾಯ್ದಿರಿಸಲಾಗಿದೆ.

ಸಹಾಯಧನ:

ಫಲಾನುಭವಿಗಳು ಸ್ವಾವಲಂಬಿ/ ಸಂಚಾರಿ ಮಾರಾಟ ಮಳಿಗೆ ಪ್ರಾರಂಭಿಸಲು ಬ್ಯಾಂಕ್ ಸಾಲ ಪಡೆದಲ್ಲಿ ಕೆಳಗಿನಂತೆ ಸಹಾಯಧನ ಒದಗಿಸಲಾಗುವುದು.

ಅ) ತಾಲ್ಲೂಕು ಮಟ್ಟದ ವರೆಗೆ ರೂ. 2.00 ಲಕ್ಷ

ಆ) ತಾಲ್ಲೂಕು/ಜಿಲ್ಲಾ ಕೇಂದ್ರ ರೂ. 3.00 ಲಕ್ಷ

ಇ) ಮಹಾನಗರ ಪಾಲಿಕೆ ರೂ. 4.00 ಲಕ್ಷ

ಈ) ಬಿ.ಬಿ.ಎಂ.ಪಿ ರೂ. 5.00 ಲಕ್ಷ

ಉಳಿದ ಮೊತ್ತ ಅಂದರೆ ಸಹಾಯಧನದಷ್ಟೆ ಅಥವಾ ಅದಕ್ಕಿಂತ ಮೇಲ್ಪಟ್ಟು ಬ್ಯಾಂಕ್ ಸಾಲ ಪಡೆದಿರಬೇಕು.

ನಿಯಮಗಳು:

1. ನಿಗಮದಿಂದ ವಿವಿಧ ಯೋಜನೆಗಳಡಿ ತರಬೇತಿ ಪಡೆದ ಅರ್ಜಿದಾರರಿಗೆ ಆದ್ಯತೆ ನೀಡಲಾಗುವುದು.
2. ಶೂ / ಪಾದರಕ್ಷೆ / ಚರ್ಮ ವಸ್ತುಗಳ ತಯಾರಿಕೆಯಲ್ಲಿ ಅನುಭವ ಹೊಂದಿದವರಿಗೆ ಆಧ್ಯತೆ.
3. ಕಚ್ಚಾಮಾಲು ಮಾರಾಟ ಮಳಿಗೆ ಪ್ರಾರಂಭಿಸುವವರು ಕಚ್ಚಾಮಾಲನ್ನು ಖರೀದಿಸಿ ಮಾರಾಟ ಮಾಡುವ ವ್ಯವಸ್ಥೆಗೆ ಸಿದ್ಧರಿರಬೇಕು.
4. ಸ್ವಂತ ಮಾರಾಟ ಮಳಿಗೆ / ಸಂಚಾರಿ ಮಾರಾಟ ಮಳಿಗೆ ಸೌಲಭ್ಯ ಪಡೆಯಲು ಬಯಸುವ ಫಲಾನುಭವಿಗಳು ಚರ್ಮ ಮತ್ತು ಸಂಬಂಧಿತ ಉತ್ಪನ್ನಗಳ ತಯಾರಿಕೆ/ಮಾರಾಟದಲ್ಲಿ ತೊಡಗಿರಬೇಕು.
5. ಉದ್ದೇಶಿತ ಕುಶಲಕರ್ಮಿಗಳು ನಿಗಮದ ಷರತ್ತು ಮತ್ತು ನಿಬಂಧನೆಗಳಿಗೆ ಒಪ್ಪಿ ಒಡಂಬಡಿಕೆ ಮಾಡಿಕೊಳ್ಳಲು ಸಿದ್ಧರಿರಬೇಕು.
6. ಮಂಜೂರಾತಿ ಪಡೆದ ಫಲಾನುಭವಿಯು ಅನರ್ಹರೆಂದು ಕಂಡು ಬಂದಲ್ಲಿ ಮಂಜೂರಾತಿಯನ್ನು ಯಾವುದೇ ಹಂತದಲ್ಲಿ ರದ್ದುಪಡಿಸಲಾಗುತ್ತದೆ.

ಅನುಷ್ಠಾನ ವಿಧಾನ:

1. ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗುವುದು.
2. ನಿಗಮದ ವೆಬ್‌ಸೈಟ್ ತಿತಿತಿ.ಟಜಿಚಿಡಿ.ಛಿಙ ,ಸಂಪರ್ಕಿಸಿ ಅರ್ಜಿಗಳನ್ನು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಆನ್‌ಲೈನ್‌ನಲ್ಲಿ ಅಪ್‌ಲೋಡ್ ಮಾಡಬಹುದು.
3. ಆನ್‌ಲೈನ್ ಅರ್ಜಿ ಸಲ್ಲಿಸಲು ಸಾಧ್ಯವಾಗದಿದ್ದಲ್ಲಿ ನಿಗಮದ ವೆಬ್‌ಸೈಟ್‌ನಲ್ಲಿ ಅರ್ಜಿಗಳನ್ನು ಡೌನ್‌ಲೋಡ್ ಮಾಡಿಕೊಂಡು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಸಂಬಂಧಪಟ್ಟ ಜಿಲ್ಲಾ ಸಂಯೋಜಕರ ಕಛೇರಿಯಲ್ಲಿ ಸಲ್ಲಿಸಬಹುದು.
4. ಕೊನೆಯ ದಿನಾಂಕದ ನಂತರ ನಿಗಮದ ಜಿಲ್ಲಾ ಸಂಯೋಜಕರು ಪರಿಶೀಲನೆ ಮಾಡಿ ಅರ್ಹ ಕುಶಲಕರ್ಮಿಗಳ ಪಟ್ಟಿ ಸಿದ್ಧಪಡಿಸಿ ಸಂಬಂಧಪಟ್ಟ ಕ್ಷೇತ್ರದ ಶಾಸಕರ ಗಮನಕ್ಕೆ ತಂದು ಜಿಲ್ಲಾ ಸಮಿತಿ ಮುಂದೆ ಮಂಡಿಸುವುದು.
5. ಜಿಲ್ಲಾ ಸಮಿತಿಯು ಜಂಟಿ ನಿರ್ದೇಶಕರು / ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿದ್ದು ಈ ಕೆಳಕಂಡ ಸದಸ್ಯರನ್ನು ಒಳಗೊಂಡಿರುತ್ತದೆ.

   1) ಜಿಲ್ಲಾ ವ್ಯವಸ್ಥಾಪಕರು ಡಾ: ಅಂ.ಅ.ನಿ.ನಿ. – ಸದಸ್ಯರು
   2) ನಿಗಮದ ಜಿಲ್ಲಾ ಸಂಯೋಜಕರು – ಸದಸ್ಯ ಕಾರ್ಯದರ್ಶಿ

6. ಮೇಲಿನ ಸಮಿತಿಯು ಫಲಾನುಭವಿಗಳನ್ನು ಆಯ್ಕೆ ಮಾಡಿದ ನಂತರ ಧೃಡೀಕರಣ ಪಡೆದು ನಿಗಮದ ಜಿಲ್ಲಾ ಸಂಯೋಜಕರು ಪಟ್ಟಿಯನ್ನು ಪ್ರಧಾನ ಕಛೇರಿಗೆ ಸಲ್ಲಿಸುವುದು.
7. ಆಯ್ಕೆ ಪಟ್ಟಿಗೆ ವ್ಯವಸ್ಥಾಪಕ ನಿರ್ದೇಶಕರ ಆಡಳಿತಾತ್ಮಕ ಅನುಮೋದನೆ ಪಡೆದು ಆಯ್ಕೆ ಪಟ್ಟಿಯನ್ನು ಸಂಬಂಧಿಸಿದ ಜಿಲ್ಲಾ ಘಟಕಗಳ ಸೂಚನಾ ಫಲಕದಲ್ಲಿ ಪ್ರಕಟಿಸುವುದು ನಂತರ ಯೋಜನೆಯನ್ನು ಅನುಷ್ಠಾನಗೊಳಿಸುವುದು.
8. ಫಲಾನುಭವಿಗಳಿಂದ ಬ್ಯಾಂಕ್ ಸಾಲ ಮಂಜೂರಾತಿ ಪತ್ರ ಮತ್ತು ಕ್ಲೈಮ್ ಫಾರಂ ಸಂಗ್ರಹಿಸಿ ಪ್ರಧಾನ ಕಛೇರಿಗೆ ಸಲ್ಲಿಸುವುದು.
9. ಅವಶ್ಯ ದಾಖಲೆಗಳನ್ನು ಸಲ್ಲಿಸಿದ ಫಲಾನುಭವಿಗಳಿಗೆ ನಿಗದಿತ ಸಮಯದೊಳಗೆ ಸಹಾಯ ಧನವನ್ನು ನೇರವಾಗಿ ಸಾಲ ಮಂಜೂರು ಮಾಡಿದ ಬ್ಯಾಂಕ್‌ಗೆ ಪಾವತಿಸಲಾಗುವುದು.

3. **"ದುಡಿಮೆ ಬಂಡವಾಳ ಸಹಾಯ ಯೋಜನೆ"**

ಉದ್ದೇಶ:

ಚರ್ಮ ಕುಶಲಕರ್ಮಿ ಕುಟುಂಬದ ಅಕ್ಷರಸ್ಥ ಯುವಕ/ ಯುವತಿಯರು ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲ ಮಾಡಿಕೊಡುವ ಉದ್ದೇಶ ಹೊಂದಲಾಗಿದೆ.

ವಿವರ:

- ಕಚ್ಚಾಮಾಲು ಮಳಿಗೆ, ಚರ್ಮೋತ್ಪನ್ನಗಳ ಅಥವಾ ಚರ್ಮೇತರ ಉತ್ಪನ್ನಗಳ ತಯಾರಿಕಾ ಘಟಕ ಮತ್ತಿತರೆ ಸಂಬಂಧಿತ ವ್ಯಾಪಾರ / ಚಟುವಟಿಕೆಗಳನ್ನು ಕೈಗೊಳ್ಳುವ ಸಲುವಾಗಿ ದುಡಿಮೆ ಬಂಡವಾಳ ಒದಗಿಸಲಾಗುವುದು.
- ಮೇಲಿನ ಆರ್ಥಿಕ ಚಟುವಟಿಕೆಗಳನ್ನು ಅನುಷ್ಠಾನಗೊಳಿಸಲು ಬ್ಯಾಂಕ್ ಸಾಲ ಪಡೆದಲ್ಲಿ ಘಟಕ ವೆಚ್ಚದ ಆಧಾರದ ಮೇಲೆ ಗರಿಷ್ಠ ರೂ. 1.00 ಲಕ್ಷಗಳವರೆಗೂ ಸಹಾಯಧನ ನೀಡಲಾಗುವುದು.

ಸಹಾಯಧನ :

- ಫಲಾನುಭವಿಗಳು ಮೇಲ್ಕಂಡ ಚಟುವಟಿಕೆಗಳಿಗಾಗಿ ಬ್ಯಾಂಕ್ ಸಾಲ ಪಡೆದಲ್ಲಿ ರೂ. 1.00 ಲಕ್ಷ ಸಹಾಯಧನ ಒದಗಿಸಲಾಗುವುದು. ಉಳಿದ ಮೊತ್ತ ಅಂದರೆ ಸಹಾಯಧನದಷ್ಟೆ ಅಥವಾ ಅದಕ್ಕಿಂತ ಮೇಲ್ಪಟ್ಟು ಬ್ಯಾಂಕ್ ಸಾಲ ಪಡೆದಿರಬೇಕು.
- 2020-21 ನೇ ಸಾಲಿನಲ್ಲಿ ಒಟ್ಟು 100 ಫಲಾನುಭವಿಗಳಿಗೆ ಸೌಲಭ್ಯ ನೀಡುವ ಗುರಿ ಹೊಂದಲಾಗಿದ್ದು, ರೂ. 105.00 ಲಕ್ಷಗಳ ಅನುದಾನವನ್ನು ಕಾಯ್ದಿರಿಸಲಾಗಿದೆ.

ನಿಯಮಗಳು:

1. ನಿಗಮದಿಂದ ವಿವಿಧ ಯೋಜನೆಗಳಡಿ ತರಬೇತಿ ಪಡೆದ ಅರ್ಜಿದಾರರಿಗೆ ಆದ್ಯತೆ ನೀಡಲಾಗುವುದು.
2. ಶೂ / ಪಾದರಕ್ಷೆ / ಚರ್ಮ ವಸ್ತುಗಳ ತಯಾರಿಕೆಯಲ್ಲಿ ಅನುಭವ ಹೊಂದಿದವರಿಗೆ ಆದ್ಯತೆ.
3. ಕಚ್ಚಾಮಾಲು ಮಾರಾಟ ಮಳಿಗೆ ಪ್ರಾರಂಭಿಸುವವರು ಕಚ್ಚಾಮಾಲನ್ನು ಖರೀದಿಸಿ ಮಾರಾಟ ಮಾಡುವ ವ್ಯವಸ್ಥೆಗೆ ಸಿದ್ಧರಿರಬೇಕು.
4. ದುಡಿಮೆ ಬಂಡವಾಳ ಸಹಾಯ ಯೋಜನೆಯಡಿ ಸೌಲಭ್ಯ ಪಡೆಯಲು ಬಯಸುವ ಫಲಾನುಭವಿಗಳು ಚರ್ಮ ಮತ್ತು ಸಂಬಂಧಿತ ಉತ್ಪನ್ನಗಳ ತಯಾರಿಕೆ/ಮಾರಾಟದಲ್ಲಿ ತೊಡಗಿರಬೇಕು.
5. ಉದ್ದೇಶಿತ ಕುಶಲಕರ್ಮಿಗಳು ನಿಗಮದ ಷರತ್ತು ಮತ್ತು ನಿಬಂಧನೆಗಳಿಗೆ ಒಪ್ಪಿ ಒಡಂಬಡಿಕೆ ಮಾಡಿಕೊಳ್ಳಲು ಸಿದ್ಧರಿರಬೇಕು.
6. ಮಂಜೂರಾತಿ ಪಡೆದ ಫಲಾನುಭವಿಯು ಅನರ್ಹರೆಂದು ಕಂಡು ಬಂದಲ್ಲಿ ಮಂಜೂರಾತಿಯನ್ನು ಯಾವುದೇ ಹಂತದಲ್ಲಿ ರದ್ದುಪಡಿಸಲಾಗುತ್ತದೆ.

ಅನುಷ್ಠಾನ ವಿಧಾನ:

1. ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗುವುದು.

2. ನಿಗಮದ ವೆಬ್‌ಸೈಟ್ ತಿತಿತಿ.ಟಜಿಇಚಿಡಿ.ಛಿಥು.ಸಂಪರ್ಕಿಸಿ ಅರ್ಜಿಗಳನ್ನು ಭರ್ತಿ ಮಾಡಿ ಅವ ್ಯ ದಾಖಲೆಗಳೊಂದಿಗೆ ಆನ್‌ಲೈನ್‌ನಲ್ಲಿ ಅಪ್‌ಲೋಡ್ ಮಾಡಬಹುದು.
3. ಆನ್‌ಲೈನ್ ಅರ್ಜಿ ಸಲ್ಲಿಸಲು ಸಾಧ್ಯವಾಗದಿದ್ದಲ್ಲಿ ನಿಗಮದ ವೆಬ್‌ಸೈಟ್‌ನಲ್ಲಿ ಅರ್ಜಿಗಳನ್ನು ಡೌನ್‌ಲೋಡ್ ಮಾಡಿಕೊಂಡು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಸಂಬಂಧಪಟ್ಟ ಜಿಲ್ಲಾ ಸಂಯೋಜಕರ ಕಛೇರಿಯಲ್ಲಿ ಸಲ್ಲಿಸಬಹುದು.
4. ಕೊನೆಯ ದಿನಾಂಕದ ನಂತರ ನಿಗಮದ ಜಿಲ್ಲಾ ಸಂಯೋಜಕರು ಪರಿಶೀಲನೆ ಮಾಡಿ ಅರ್ಹ ಕುಶಲಕರ್ಮಿಗಳ ಪಟ್ಟಿ ಸಿದ್ಧಪಡಿಸಿ ಸಂಬಂಧಪಟ್ಟ ಕ್ಷೇತ್ರದ ಶಾಸಕರ ಗಮನಕ್ಕೆ ತಂದು ಜಿಲ್ಲಾ ಸಮಿತಿ ಮುಂದೆ ಮಂಡಿಸುವುದು.
5. ಜಿಲ್ಲಾ ಸಮಿತಿಯು ಜಂಟಿ ನಿರ್ದೇಶಕರು / ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿದ್ದು ಈ ಕೆಳಕಂಡ ಸದಸ್ಯರನ್ನು ಒಳಗೊಂಡಿರುತ್ತದೆ.

   1) ಜಿಲ್ಲಾ ವ್ಯವಸ್ಥಾಪಕರು ಡಾ: ಅಂ.ಅ.ನಿ.ನಿ. – ಸದಸ್ಯರು
   2) ನಿಗಮದ ಜಿಲ್ಲಾ ಸಂಯೋಜಕರು – ಸದಸ್ಯ ಕಾರ್ಯದರ್ಶಿ
6. ಮೇಲಿನ ಸಮಿತಿಯು ಫಲಾನುಭವಿಗಳನ್ನು ಆಯ್ಕೆ ಮಾಡಿದ ನಂತರ ದೃಡೀಕರಣ ಪಡೆದು ನಿಗಮದ ಜಿಲ್ಲಾ ಸಂಯೋಜಕರು ಪಟ್ಟಿಯನ್ನು ಪ್ರಧಾನ ಕಛೇರಿಗೆ ಸಲ್ಲಿಸುವುದು.
7. ಆಯ್ಕೆ ಪಟ್ಟಿಗೆ ವ್ಯವಸ್ಥಾಪಕ ನಿರ್ದೇಶಕರ ಆಡಳಿತಾತ್ಮಕ ಅನುಮೋದನೆ ಪಡೆದು ಆಯ್ಕೆ ಪಟ್ಟಿಯನ್ನು ಸಂಬಂಧಿಸಿದ ಜಿಲ್ಲಾ ಘಟಕಗಳ ಸೂಚನಾ ಫಲಕದಲ್ಲಿ ಪ್ರಕಟಿಸುವುದು ನಂತರ ಯೋಜನೆಯನ್ನು ಅನುಷ್ಠಾನಗೊಳಿಸುವುದು.
8. ಫಲಾನುಭವಿಗಳಿಂದ ಬ್ಯಾಂಕ್ ಸಾಲ ಮಂಜೂರಾತಿ ಪತ್ರ ಮತ್ತು ಕ್ಲೈಮ್ ಫಾರಂ ಸಂಗ್ರಹಿಸಿ ಪ್ರಧಾನ ಕಛೇರಿಗೆ ಸಲ್ಲಿಸುವುದು.
9. ಅವಶ್ಯ ದಾಖಲೆಗಳನ್ನು ಸಲ್ಲಿಸಿದ ಫಲಾನುಭವಿಗಳಿಗೆ ನಿಗದಿತ ಸಮಯದೊಳಗೆ ಸಹಾಯ ಧನವನ್ನು ನೇರವಾಗಿ ಸಾಲ ಮಂಜೂರು ಮಾಡಿದ ಬ್ಯಾಂಕ್‌ಗೆ ಪಾವತಿಸಲಾಗುವುದು.

## 4. <u>"ಪಾದುಕೆ ಕುಟೀರ" ಒದಗಿಸುವ ಯೋಜನೆ</u>

ಉದ್ದೇಶ:

ಈ ಯೋಜನೆಯಡಿ ಬೀದಿ ಬದಿ ಕುಳಿತು ಕಾಯಕ ನಿರ್ವಹಿಸುತ್ತಿರುವ ಚರ್ಮಕಾರರು ಸ್ಥಳೀಯ ಸಂಸ್ಥೆಗಳಿಂದ/ ಇತರೆ ಸಂಸ್ಥೆಗಳಿಂದ ಪರವಾನಗಿ ಪಡೆದು ಸಲ್ಲಿಸಿದಲ್ಲಿ ಗೌರವಯುತವಾಗಿ/ ಸುರಕ್ಷಿತವಾಗಿ ಕುಳಿತು ಕಾರ್ಯ ನಿರ್ವಹಿಸಲು ಅನುವಾಗುವಂತೆ ಪಾದುಕೆ ಕುಟೀರಗಳನ್ನು ಒದಗಿಸುವ ಉದ್ದೇಶ ಹೊಂದಲಾಗಿದೆ.

ವಿವರ:

- ಚರ್ಮ ಕುಶಲಕರ್ಮಿಗಳಿಗೆ ಸ್ವಯಂ ಉದ್ಯೋಗ ಕಲ್ಪಿಸಿಕೊಡುವ ನಿಟ್ಟಿನಲ್ಲಿ ಅವರು ತಯಾರಿಸಿದ ಉತ್ಪನ್ನಗಳನ್ನು ಮಾರಾಟ ಮಾಡಲು/ ದುರಸ್ತಿ ಕಾರ್ಯ ಮಾಡಲು ಅನುವಾಗುವಂತೆ ಸಂಬಂಧಪಟ್ಟ ಸ್ಥಳೀಯ ಪ್ರಾಧಿಕಾರಗಳಿಂದ್ / ಇಲಾಖೆಗಳಿಂದ ಪರವಾನಗಿ ಪಡೆದು ಅರ್ಜಿ ಸಲ್ಲಿಸಿದಲ್ಲಿ ಪಾದುಕೆ ಕುಟೀರಗಳನ್ನು ಸ್ಥಾಪಿಸಿಕೊಡಲಾಗುವುದು.

- ಕುಶಲಕರ್ಮಿಗಳು ತಯಾರಿಸಿದ ಉತ್ಪನ್ನಗಳಿಗೆ ಮಾರುಕಟ್ಟೆ ಲಿಂಕೇಜ್ ದೊರಕಿಸಿಕೊಡುವುದು ಮತ್ತು ಅವರ ಜೀವನೋಪಾಯಕ್ಕೆ ಆದಾಯ ಗಳಿಸಲು ಅನುಕೂಲ ಮಾಡಿಕೊಡುವ ಉದ್ದೇಶ ಹೊಂದಲಾಗಿದೆ.

  ಘಟಕ ವೆಚ್ಚ :

- ರೂ. 85,904/- ಪಾದುಕೆ ಕುಟೀರದ ಜೊತೆಗೆ ರೂ. 4,130/- ಬೆಲೆಯ ಉಪಕರಣ ಪೆಟ್ಟಿಗೆ ಉಚಿತವಾಗಿ ನೀಡಲಾಗುವುದು.

| ಕ್ರಸಂ | ವಿವರ | ಅನುದಾನ ರೂ. ಗಳಲ್ಲಿ |
|---|---|---|
| 1. | ಕುಟೀರದ ಅನುದಾನ | 72800.00 |
| 2. | ಉಪಕರಣ ಪೆಟ್ಟಿಗೆ | 3500.00 |
| 3. | ಜಿಎಸ್‌ಟಿ | 13734.00 |
| | ಒಟ್ಟು ರೂ. | 90034.00 |

ನಿಯಮಗಳು:

1. ಸಂಬಂಧಪಟ್ಟ ಸ್ಥಳೀಯ ಸಂಸ್ಥೆಗಳಿಂದ ಕುಟೀರ ಸ್ಥಾಪನೆಗೆ ಪರವಾನಗಿ (ಲೈಸೆನ್ಸ್) ಪಡೆದಿರಬೇಕು.
2. ಈ ಹಿಂದೆ ನಿಗಮದಿಂದ ಪಾದುಕೆ ಕುಟೀರ ಪಡೆದಿರಬಾರದು/ಪಡೆದಿದ್ದಲ್ಲಿ 10 ವರ್ಷಕ್ಕಿಂತ ಮೇಲ್ಪಟ್ಟದಾಗಿದ್ದು ಜಖಂಗೊಂಡಿದ್ದಲ್ಲಿ ಅರ್ಜಿ ಸಲ್ಲಿಸಬಹುದು.
3. ಒಂದು ಕುಟುಂಬದಲ್ಲಿ ಒಬ್ಬ ಕುಶಲಕರ್ಮಿಗೆ ಮಾತ್ರ ಅವಕಾಶ ನೀಡುವುದು (ಕುಟುಂಬ ಎಂದರೆ ಗಂಡ, ಹೆಂಡತಿ ಮತ್ತು ಮದುವೆಯಾಗದ ಮಕ್ಕಳು)
4. ಮಂಜೂರಾತಿ ಪಡೆದ ಫಲಾನುಭವಿಯು ಅನರ್ಹರೆಂದು ಕಂಡು ಬಂದಲ್ಲಿ ಮಂಜೂರಾತಿಯನ್ನು ಯಾವುದೇ ಹಂತದಲ್ಲಿ ರದ್ದುಪಡಿಸಲಾಗುತ್ತದೆ.

ಅನುಷ್ಠಾನ ವಿಧಾನ:

1. ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗುವುದು.
2. ನಿಗಮದ ವೆಬ್‌ಸೈಟ್ www.lidkar.com ಸಂಪರ್ಕಿಸಿ ಅರ್ಜಿಗಳನ್ನು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಆನ್‌ಲೈನ್‌ನಲ್ಲಿ ಅಪ್‌ಲೋಡ್ ಮಾಡಬಹುದು.
3. ಆನ್‌ಲೈನ್ ಅರ್ಜಿ ಸಲ್ಲಿಸಲು ಸಾಧ್ಯವಾಗದಿದ್ದಲ್ಲಿ ನಿಗಮದ ವೆಬ್‌ಸೈಟ್‌ನಲ್ಲಿ ಅರ್ಜಿಗಳನ್ನು ಡೌನ್‌ಲೋಡ್ ಮಾಡಿಕೊಂಡು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಸಂಬಂಧಪಟ್ಟ ಜಿಲ್ಲಾ ಸಂಯೋಜಕರ ಕಛೇರಿಯಲ್ಲಿ ಸಲ್ಲಿಸಬಹುದು.
4. ಕೊನೆಯ ದಿನಾಂಕದ ನಂತರ ನಿಗಮದ ಜಿಲ್ಲಾ ಸಂಯೋಜಕರು ಪರಿಶೀಲನೆ ಮಾಡಿ ಅರ್ಹ ಕುಶಲಕರ್ಮಿಗಳ ಪಟ್ಟಿ ಸಿದ್ಧಪಡಿಸಿ ಸಂಬಂಧಪಟ್ಟ ಕ್ಷೇತ್ರದ ಶಾಸಕರ ಗಮನಕ್ಕೆ ತಂದು ಜಿಲ್ಲಾ ಸಮಿತಿ ಮುಂದೆ ಮಂಡಿಸುವುದು.
5. ಜಿಲ್ಲಾ ಸಮಿತಿಯು ಜಂಟಿ ನಿರ್ದೇಶಕರು / ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರೊಂದಿಗೆ ಕಾರ್ಯ ನಿರ್ವಹಿಸುವುದು

   1) ಜಿಲ್ಲಾ ವ್ಯವಸ್ಥಾಪಕರು ಡಾ: ಅಂ.ಅ.ನಿ.ನಿ. – ಸದಸ್ಯರು

2) ನಿಗಮದ ಜಿಲ್ಲಾ ಸಂಯೋಜಕರು - ಸದಸ್ಯ ಕಾರ್ಯದರ್ಶಿ

6. ಮೇಲಿನ ಸಮಿತಿಯು ಫಲಾನುಭವಿಗಳನ್ನು ಆಯ್ಕೆ ಮಾಡಿದ ನಂತರ ದೃಢೀಕರಣ ಪಡೆದು ನಿಗಮದ ಜಿಲ್ಲಾ ಸಂಯೋಜಕರು ಪಟ್ಟಿಯನ್ನು ಪ್ರಧಾನ ಕಛೇರಿಗೆ ಸಲ್ಲಿಸುವುದು.
7. ಆಯ್ಕೆ ಪಟ್ಟಿಗೆ ವ್ಯವಸ್ಥಾಪಕ ನಿರ್ದೇಶಕರ ಆಡಳಿತಾತ್ಮಕ ಅನುಮೋದನೆ ಪಡೆದು ಆಯ್ಕೆ ಪಟ್ಟಿಯನ್ನು ಸಂಬಂಧಿಸಿದ ಜಿಲ್ಲಾ ಘಟಕಗಳ ಸೂಚನಾ ಫಲಕದಲ್ಲಿ ಪ್ರಕಟಿಸುವುದು ನಂತರ ಯೋಜನೆಯನ್ನು ಅನುಷ್ಠಾನಗೊಳಿಸುವುದು.
8. ಜಿಲ್ಲಾ ಸಂಯೋಜಕರು ನಿಗಧಿತ ಸಮಯದೊಳಗೆ ಫಲಾನುಭವಿಗಳಿಂದ ಪರವಾನಗಿ ಪತ್ರ/ ವಿವರ ಸಂಗ್ರಹಿಸಿ ಪ್ರಧಾನ ಕಛೇರಿಗೆ ಸಲ್ಲಿಸುವುದು. ಇಲ್ಲದಿದ್ದಲ್ಲಿ ಫಲಾನುಭವಿಗಳ ಆಯ್ಕೆಯನ್ನು ರದ್ದುಪಡಿಸಲಾಗುವುದು ಮತ್ತು ಕಾಯ್ದಿರಿಸಿದ ಪಟ್ಟಿಯಲ್ಲಿರುವ ಫಲಾನುಭವಿಗಳಿಗೆ ಅವಕಾಶ ಕಲ್ಪಿಸಲಾಗುವುದು.

5. **ಚರ್ಮಕಾರರ ಕಿರು ಆರ್ಥಿಕ ಚಟುವಟಿಕೆಗಳಿಗಾಗಿ ನೇರ ಸಾಲ ಯೋಜನೆ**

ಉದ್ದೇಶ:

ಬೀದಿ ಬದಿ ಕುಳಿತು ಕಾಯಕದಲ್ಲಿ ತೊಡಗಿರುವ ಮತ್ತು ಸಣ್ಣ ಪುಟ್ಟ ವ್ಯಾಪಾರ ಮಾಡಿಕೊಂಡಿರುವ ಚರ್ಮ ಕುಶಲಕರ್ಮಿಗಳಿಗೆ ಕಿರು ಆರ್ಥಿಕ ಚಟುವಟಿಕೆಗಳನ್ನು ಕೈಗೊಂಡು ಜೀವನೋಪಾಯಕ್ಕೆ ಅನುಕೂಲವಾಗುವಂತೆ ನಿಗಮದಿಂದ ನೇರ ಸಾಲ ಮತ್ತು ಸಹಾಯಧನ ಒದಗಿಸಿ ಸ್ವಯಂ ಉದ್ಯೋಗ ಕಲ್ಪಿಸುವುದು ಈ ಯೋಜನೆಯ ಉದ್ದೇಶವಾಗಿದೆ.

ವಿವರ:

ಬೀದಿ ಬದಿ ಕುಳಿತು ಕಾಯಕ ನಿರ್ವಹಿಸುತ್ತಿರುವ ಚರ್ಮಕಾರರು ಮತ್ತು ತರಬೇತಿ ಪಡೆದ ಚರ್ಮ ಕುಶಲಕರ್ಮಿಗಳು ಗುಡಿ ಕೈಗಾರಿಕೆ ಅಥವಾ ಮನೆಗಳಲ್ಲಿ ಚರ್ಮ ಉತ್ಪನ್ನಗಳನ್ನು ತಯಾರಿಸಲು, ಶೂ/ಚಪ್ಪಲಿ ತಯಾರಿಕೆಗೆ ಕಚ್ಚಾಮಾಲು ಖರೀದಿ, ಚರ್ಮಕಾರರ ಕುಟೀರದಲ್ಲಿ ಉತ್ಪಾದನೆ ಮತ್ತು ಮಾರಾಟ, ಶೂ/ ಪಾದರಕ್ಷೆ ಮತ್ತು ಇತರೆ ಚರ್ಮ ವಸ್ತುಗಳ ದುರಸ್ತಿ ಮಾಡುವ ಅಂಗಡಿ ತೆರೆಯುವುದು, ತಯಾರಿಸಿದ ಉತ್ಪನ್ನಗಳನ್ನು ತಳ್ಳುವ ಗಾಡಿ ಅಥವಾ ಲಘು ವಾಹನದಲ್ಲಿಟ್ಟು ಮಾರಾಟ ಮಾಡುವುದು, ಸಿದ್ಧ ವಸ್ತುಗಳಾದ ಹವಾಯಿ ಚಪ್ಪಲ, ಚರ್ಮೇತರ ಪಾದರಕ್ಷೆಗಳು, ಸ್ಕೂಲ್ ಬ್ಯಾಗ್‌ಗಳು ಮತ್ತಿತರೆ ವಸ್ತುಗಳನ್ನು ಖರೀದಿಸಿ ಮಾರಾಟ ಮಾಡುವುದು, ಚರ್ಮ ಹದ ಮಾಡುವ ಚಟುವಟಿಕೆ ಇತ್ಯಾದಿ., ಆರ್ಥಿಕ ಚಟುವಟಿಕೆಗಳನ್ನು ಹಮ್ಮಿಕೊಂಡು ಜೀವನೋಪಾಯಕ್ಕೆ ಅನುಕೂಲ ಮಾಡಿಕೊಡುವ ನಿಟ್ಟಿನಲ್ಲಿ ನಿಗಮದಿಂದ ನೇರ ಸಾಲ ಮತ್ತು ಸಹಾಯಧನವನ್ನು ಮಂಜೂರು ಮಾಡಲಾಗುವುದು.

ಘಟಕ ವೆಚ್ಚ:

1) ಘಟಕ ವೆಚ್ಚ - ರೂ. 50,000/-
2) ನಿಗಮದಿಂದ ಶೇ. 4ರ ಬಡ್ಡಿ ದರದಲ್ಲಿ ಸಾಲ - ರೂ. 25,000/-
3) ನಿಗಮದಿಂದ ಸಹಾಯಧನ - ರೂ. 25,000/-

ಫಲಾನುಭವಿಗಳ ಆಯ್ಕೆ ವಿಧಾನ ಹಾಗೂ ಅನುಷ್ಠಾನದ ವಿವಿಧ ಹಂತಗಳು:

1) ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗುವುದು.
2) ನಿಗಮದ ವೆಬ್‌ಸೈಟ್ ತಿತಿತಿ.ಟಿಜಚಿಣಾಚಿಡಿ.ಛಿಡು.ಸಂಪರ್ಕಿಸಿ ಅರ್ಜಿಗಳನ್ನು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಆನ್‌ಲೈನ್‌ನಲ್ಲಿ ಅಪ್‌ಲೋಡ್ ಮಾಡಬಹುದು.
3) ಆನ್‌ಲೈನ್ ಅರ್ಜಿ ಸಲ್ಲಿಸಲು ಸಾಧ್ಯವಾಗದಿದ್ದಲ್ಲಿ ನಿಗಮದ ವೆಬ್‌ಸೈಟ್‌ನಲ್ಲಿ ಅರ್ಜಿಗಳನ್ನು ಡೌನ್‌ಲೋಡ್ ಮಾಡಿಕೊಂಡು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಸಂಬಂಧಪಟ್ಟ ಜಿಲ್ಲಾ ಸಂಯೋಜಕರ ಕಛೇರಿಯಲ್ಲಿ ಸಲ್ಲಿಸಬಹುದು.
4) ಕೊನೆಯ ದಿನಾಂಕದ ನಂತರ ನಿಗಮದ ಜಿಲ್ಲಾ ಸಂಯೋಜಕರು ಪರಿಶೀಲನೆ ಮಾಡಿ ಅರ್ಹ ಕುಶಲಕರ್ಮಿಗಳ ಪಟ್ಟಿ ಸಿದ್ಧಪಡಿಸಿ ಸಂಬಂಧಪಟ್ಟ ಕ್ಷೇತ್ರದ ಶಾಸಕರ ಗಮನಕ್ಕೆ ತಂದು ಜಿಲ್ಲಾ ಸಮಿತಿ ಮುಂದೆ ಮಂಡಿಸುವುದು.
5) ಆಯ್ಕೆ ಸಮಿತಿಯು ಪರಿಶೀಲಿಸಿ ನಿಗಧಿತ ಗುರಿಗಿಂತ ಹೆಚ್ಚಿನ ಅರ್ಹ ಫಲಾಪೇಕ್ಷಿಗಳು ಇದ್ದಲ್ಲಿ ಲಾಟರಿ ವಿಧಾನದಿಂದ ಆಯ್ಕೆ ಮಾಡಲಾಗುವುದು.
6) ಆಯ್ಕೆ ಪಟ್ಟಿಯನ್ನು ಪ್ರಧಾನ ಕಛೇರಿಗೆ ಸಲ್ಲಿಸಿ ಆಡಳಿತಾತ್ಮಕ ಅನುಮೋದನೆ ಪಡೆದು ಅನುಷ್ಠಾನಗೊಳಿಸುವುದು.
7) ರೂ. 25,000/- ಸಾಲದ ಮೊತ್ತವನ್ನು ವಿತರಣೆ ಮಾಡುವ ಸಂದರ್ಭದಲ್ಲಿ ಕಾನೂನು ರೀತ್ಯಾ ಅಗತ್ಯವಿರುವ ಕರಾರು ಪತ್ರ ಮತ್ತು ಇತರೆ ಭದ್ರತಾ ದಾಖಲಾತಿಗಳನ್ನು ಪಡೆಯುವುದು.
8) ಈ ರೀತಿ ವಿತರಣೆ ಮಾಡಿದ ಸಾಲವನ್ನು ಶೇ. 4 ರ ಬಡ್ಡಿ ಸಮೇತ 24 ಸಮಾನ ಕಂತುಗಳಲ್ಲಿ ವಸೂಲಾತಿ ಮಾಡುವುದು.

### 16. <u>ಡಾ|| ಬಾಬು ಜಗಜೀವನ ರಾಂ ಚರ್ಮಕಾರರ ವಸತಿ ಯೋಜನೆ :</u>

ಉದ್ದೇಶ:

- ಚರ್ಮೋದ್ಯೋಗದಲ್ಲಿ ತೊಡಗಿರುವ ಪರಿಶಿಷ್ಟ ಜಾತಿಯ ಕುಶಲಕರ್ಮಿಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ.
- ಖಾಲಿ ನಿವೇಶನ/ ಗುಡಿಸಲು/ ಶಿಥಿಲಗೊಂಡ ಮನೆಗಳನ್ನು ಹೊಂದಿರುವ ಚರ್ಮಕಾರರಿಗೆ ವಾಸಕ್ಕೆ ಮತ್ತು ಉದ್ಯೋಗ ಮುಂದುವರೆಸಲು ಅನುಕೂಲವಾಗುವಂತೆ ವಸತಿ ಕಾರ್ಯಾಗಾರಗಳನ್ನು ನಿರ್ಮಿಸಿಕೊಳ್ಳಲು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಮೂಲಕ ಧನಸಹಾಯವನ್ನು ಕಂತುಗಳಲ್ಲಿ ಬಿಡುಗಡೆ ಮಾಡಲಾಗುವುದು.
- 2020-21 ನೇ ಸಾಲಿನಲ್ಲಿ ಒಟ್ಟು 400 ಫಲಾನುಭವಿಗಳಿಗೆ ಸೌಲಭ್ಯ ನೀಡುವ ಗುರಿ ಹೊಂದಲಾಗಿದ್ದು, ರೂ. 992.44 ಲಕ್ಷಗಳ ಅನುದಾನವನ್ನು ಕಾಯ್ದಿರಿಸಲಾಗಿದೆ.

ಘಟಕ ವೆಚ್ಚ:

| | |
|---|---|
| ಒಟ್ಟು | ರೂ. 2.50 ಲಕ್ಷಗಳು |
| ಸಹಾಯಧನ | ರೂ. 2.20 ಲಕ್ಷಗಳು |
| ಫಲಾನುಭವಿ ವಂತಿಕೆ | ರೂ. 0.30 ಲಕ್ಷಗಳು |

ನಿಯಮಗಳು:

1. ಈ ಹಿಂದೆ ನಿಗಮದಿಂದ ಅಥವಾ ಸರ್ಕಾರದ ಬೇರೆ ಯಾವುದೇ ಯೋಜನೆ ಅಡಿ ವಸತಿ ಸೌಲಭ್ಯ ಪಡೆದಿರಬಾರದು.
2. ನಿಗಮವು ನಿಗದಿಪಡಿಸುವ ವಂತಿಗೆ ಹಣ ನೀಡಲು ಶಕ್ತರಿರಬೇಕು.
3. ಒಂದು ಕುಟುಂಬದಲ್ಲಿ ಒಬ್ಬರೇ ಮಾತ್ರ ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆ.
4. ಸಂಬಂಧಪಟ್ಟ ಸ್ಥಳೀಯ ಸಂಸ್ಥೆಗಳಿಂದ ವೃತ್ತಿ ಪ್ರಮಾಣ ಪತ್ರ ಪಡೆದಿರಬೇಕು/ ಲಿಡ್ಕರ್ ನಿಗಮದ ತಾಂತ್ರಿಕ ವಿಭಾಗವು ನೀಡಿದ ಕೌಶಲ್ಯ ಪ್ರಮಾಣ ಪತ್ರವನ್ನು ಹೊಂದಿರಬೇಕು.
5. ಮಂಜೂರಾತಿ ಪಡೆದ ಫಲಾನುಭವಿಯು ಅನರ್ಹರೆಂದು ಕಂಡು ಬಂದಲ್ಲಿ ಮಂಜೂರಾತಿಯನ್ನು ಯಾವುದೇ ಹಂತದಲ್ಲಿ ರದ್ದುಪಡಿಸಲಾಗುತ್ತದೆ.

ಅನುಷ್ಠಾನ ವಿಧಾನ :

1. ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗುವುದು.
2. ನಿಗಮದ ವೆಬ್‌ಸೈಟ್ www.lidkar.com ,ಸಂಪರ್ಕಿಸಿ ಅರ್ಜಿಗಳನ್ನು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಆನ್‌ಲೈನ್‌ನಲ್ಲಿ ಅಪ್‌ಲೋಡ್ ಮಾಡಬಹುದು.
3. ಆನ್‌ಲೈನ್ ಅರ್ಜಿ ಸಲ್ಲಿಸಲು ಸಾಧ್ಯವಾಗದಿದ್ದಲ್ಲಿ ನಿಗಮದ ವೆಬ್‌ಸೈಟ್‌ನಲ್ಲಿ ಅರ್ಜಿಗಳನ್ನು ಡೌನ್‌ಲೋಡ್ ಮಾಡಿಕೊಂಡು ಭರ್ತಿ ಮಾಡಿ ಅವಶ್ಯ ದಾಖಲೆಗಳೊಂದಿಗೆ ಸಂಬಂಧಪಟ್ಟ ಜಿಲ್ಲಾ ಸಂಯೋಜಕರ ಕಛೇರಿಯಲ್ಲಿ ಸಲ್ಲಿಸಬಹುದು.
4. ಕೊನೆಯ ದಿನಾಂಕದ ನಂತರ ನಿಗಮದ ಜಿಲ್ಲಾ ಸಂಯೋಜಕರು ಪರಿಶೀಲನೆ ಮಾಡಿ ಅರ್ಹ ಕುಶಲಕರ್ಮಿಗಳ ಪಟ್ಟಿ ಸಿದ್ಧಪಡಿಸಿ ಸಂಬಂಧಪಟ್ಟ ಕ್ಷೇತ್ರದ ಶಾಸಕರ ಗಮನಕ್ಕೆ ತಂದು ಜಿಲ್ಲಾ ಸಮಿತಿ ಮುಂದೆ ಮಂಡಿಸುವುದು.
5. ಸರ್ಕಾರಿ ಆದೇಶ ಸಂಖ್ಯೆ: ಸಕಇ 37 ಎಸ್‌ಎಲ್‌ಪಿ 2015, ಬೆಂಗಳೂರು, ದಿನಾಂಕ: 09-09-2015 ರಂತೆ ಈ ಯೋಜನೆಯನ್ನು ರಾಜೀವ ಗಾಂಧಿ ಗ್ರಾಮೀಣ ವಸತಿ ನಿಗಮದ ಮೂಲಕ ಅನುಷ್ಠಾನಗೊಳಿಸಬೇಕಾಗಿದ್ದು ಈ ಆದೇಶದಲ್ಲಿ ನಿಗದಿಪಡಿಸಿರುವ ಮಾನದಂಡಗಳು/ ಅರ್ಹತೆ ಮತ್ತು ವಿಧಿವಿಧಾನಗಳನ್ನು ಅನುಸರಿಸುವುದು.
2. ಜಿಲ್ಲಾ ಸಮಿತಿಯು ಜಂಟಿ ನಿರ್ದೇಶಕರು / ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರೊಂದಿಗೆ ಕಾರ್ಯ ನಿರ್ವಹಿಸುವುದು
   1) ಜಿಲ್ಲಾ ವ್ಯವಸ್ಥಾಪಕರು ಡಾ: ಅಂ.ಅ.ನಿ.ನಿ. – ಸದಸ್ಯರು
   2) ನಿಗಮದ ಜಿಲ್ಲಾ ಸಂಯೋಜಕರು – ಸದಸ್ಯ ಕಾರ್ಯದರ್ಶಿ
3. ಮೇಲಿನ ಸಮಿತಿಯು ಫಲಾನುಭವಿಗಳನ್ನು ಆಯ್ಕೆ ಮಾಡಿದ ನಂತರ ದೃಢೀಕರಣ ಪಡೆದು ನಿಗಮದ ಜಿಲ್ಲಾ ಸಂಯೋಜಕರು ಪಟ್ಟಿಯನ್ನು ಪ್ರಧಾನ ಕಛೇರಿಗೆ ಸಲ್ಲಿಸುವುದು.
4. ಆಯ್ಕೆ ಪಟ್ಟಿಗೆ ವ್ಯವಸ್ಥಾಪಕ ನಿರ್ದೇಶಕರ ಆಡಳಿತಾತ್ಮಕ ಅನುಮೋದನೆ ಪಡೆದು ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ಅನುಷ್ಠಾನಕ್ಕಾಗಿ / ಅನುದಾನ ಬಿಡುಗಡೆಗಾಗಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಸಲ್ಲಿಸಲಾಗುವುದು.

## ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಅಭಯ್ ಪಾಟೀಲ್ ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ-260ಕ್ಕೆ ಅನುಬಂಧ-೭

### 2018-19ನೇ ಸಾಲಿನ ಪ್ರಗತಿ ಕಾಲೋನಿ ಯೋಜನೆಯಡಿ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಬೆಳಗಾವಿ ಜಿಲ್ಲೆಯ ವಿಧಾನಸಭಾ ಕ್ಷೇತ್ರಗಳಿಗೆ ಬಿಡುಗಡೆ ಮಾಡಿರುವ ಅನುದಾನದ ವಿವರ

ರೂ.ಲಕ್ಷಗಳಲ್ಲಿ

| ಕ್ರ. ಸಂ | ವಿಧಾನಸಭಾ ಕ್ಷೇತ್ರದ ಹೆಸರು | ಮಂಜೂರಾತಿ ಮೊತ್ತ | ಬಿಡುಗಡೆ ಮೊತ್ತ |
|---|---|---|---|
| 1 | ಕುಡಚಿ | 250.00 | 220.68 |
| 2 | ರಾಯಬಾಗ | 185.00 | 163.30 |
| 3 | ಯಮಕನಮರಡಿ | 240.00 | 211.85 |
| 4 | ಚಿಕ್ಕೋಡಿ-ಸದಲಗಾ | 235.29 | 207.69 |
| 5 | ಅಥಣಿ | 224.71 | 198.20 |
| 6 | ಕಾಗವಾಡ | 135.00 | 119.16 |
| 7 | ಗೋಕಾಕ | 135.00 | 119.16 |
| 8 | ಬೆಳಗಾವಿ ಗ್ರಾಮಾಂತರ | 285.00 | 251.57 |
| 9 | ಖಾನಾಪುರ | 135.00 | 119.16 |
| 10 | ಬೈಲಹೊಂಗಲ | 135.00 | 119.16 |
| 11 | ಹುಕ್ಕೇರಿ | 85.00 | 75.03 |
| 12 | ನಿಪ್ಪಾಣಿ | 85.00 | 75.03 |
| | **ಒಟ್ಟು** | **2130.00** | **1880.00** |

## ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಅಭಯ್ ಪಾಟೀಲ್ ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ-260ಕ್ಕೆ ಅನುಬಂಧ-2

2018-19ನೇ ಸಾಲಿನ ಪ್ರಗತಿ ಕಾಲೋನಿ ಯೋಜನೆಯಡಿ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಬೆಳಗಾವಿ ಜಿಲ್ಲೆಯ ವಿಧಾನಸಭಾ ಕ್ಷೇತ್ರಗಳಿಗೆ ಬಿಡುಗಡೆ ಮಾಡಿರುವ ಅನುದಾನದಲ್ಲಿ ಕೈಗೊಂಡಿರುವ ಕಾಮಗಾರಿಗಳ ವಿವರ

ರೂ.ಲಕ್ಷಗಳಲ್ಲಿ

| ಕ್ರ. ಸಂ | ವಿಧಾನಸಭಾ ಕ್ಷೇತ್ರ | ಪರಿಶಿಷ್ಟ ಜಾತಿ ಕಾಲೋನಿ ವಿವರ | ಕಾಮಗಾರಿಯ ವಿವರ | ಮಂಜೂರಾತಿ ಮೊತ್ತ | ಕಾಮಗಾರಿಯ ಪ್ರಸ್ತುತ ಹಂತ |
|---|---|---|---|---|---|
| 1 | ಕುಡಚಿ | ಗುಂಡವಾಡ ಗ್ರಾಮ, ಹಿಡಕಲ್ ಗ್ರಾಮ ಮತ್ತು ನಿಲಜಿ ಗ್ರಾಮಗಳಲ್ಲಿ | ಸಿ.ಸಿ.ರಸ್ತೆ ನಿರ್ಮಾಣ. | 40.00 | ಮುಕ್ತಾಯಗೊಂಡಿದೆ |
| 2 | ಕುಡಚಿ | ಖೇಮಲಾಪುರ | ಸಿ.ಸಿ.ರಸ್ತೆ ನಿರ್ಮಾಣ. | 35.00 | ಮುಕ್ತಾಯಗೊಂಡಿದೆ |
| 3 | ಕುಡಚಿ | ಯಲ್ಪಾರಟ್ಟಿ | ಖೇಮಲಾಪೂರ ರಸ್ತೆಯಿಂದ ಗಸ್ತಿ ತೋಟದವರೆಗೆ ರಸ್ತೆ ನಿರ್ಮಾಣ. | 75.00 | ಮುಕ್ತಾಯಗೊಂಡಿದೆ |
| 4 | ಕುಡಚಿ | ಅಳಗವಾಡಿ | ಸಂಪರ್ಕರಸ್ತೆ | 25.00 | ಪ್ರಾರಂಭಿಸಬೇಕಿದೆ |
| 5 | ಕುಡಚಿ | ಖಣೇಮಲಾಪುರ | ಸಿ.ಸಿ.ರಸ್ತೆ ಮತ್ತು ಚರಂಡಿ ನಿರ್ಮಾಣ. | 25.00 | ಪ್ರಾರಂಭಿಸಬೇಕಿದೆ |
| 6 | ಕುಡಚಿ | ಕುಡಚಿ | ಸಿ.ಸಿ.ರಸ್ತೆ ಮತ್ತು ಚರಂಡಿ ನಿರ್ಮಾಣ. | 25.00 | ಪ್ರಾರಂಭಿಸಬೇಕಿದೆ |
| 7 | ಕುಡಚಿ | ನಿಡಗುಂದಿ | ಸಿ.ಸಿ.ರಸ್ತೆ ಮತ್ತು ಚರಂಡಿ ನಿರ್ಮಾಣ. | 25.00 | ಪ್ರಾರಂಭಿಸಬೇಕಿದೆ |
| 8 | ರಾಯಬಾಗ | ದಿಗ್ಗೇವಾಡಿ | ಸಿ.ಸಿ.ರಸ್ತೆ ನಿರ್ಮಾಣ. | 25.00 | ಮುಕ್ತಾಯಗೊಂಡಿದೆ |
| 9 | ರಾಯಬಾಗ | ನಾಗರಾಳ | ಸಿ.ಸಿ.ರಸ್ತೆ ನಿರ್ಮಾಣ. | 25.00 | ಮುಕ್ತಾಯಗೊಂಡಿದೆ |
| 10 | ರಾಯಬಾಗ | ಹಾರೂಗೇರಿ | ಸಿ.ಸಿ.ರಸ್ತೆ ನಿರ್ಮಾಣ. | 25.00 | ಮುಕ್ತಾಯಗೊಂಡಿದೆ |
| 11 | ರಾಯಬಾಗ | ಕೆಂಪಟ್ಟಿ | ಸಿ.ಸಿ.ರಸ್ತೆ ನಿರ್ಮಾಣ. | 17.00 | ಮುಕ್ತಾಯಗೊಂಡಿದೆ |
| 12 | ರಾಯಬಾಗ | ಜಲಾಲಪೂರ | ಸಿ.ಸಿ.ರಸ್ತೆ ನಿರ್ಮಾಣ. | 8.00 | ಮುಕ್ತಾಯಗೊಂಡಿದೆ |
| 13 | ರಾಯಬಾಗ | ಕರಗಾಂವ್ ಗ್ರಾಮ, ಮುಗಳ ಗ್ರಾಮ ಮತ್ತು ಕರೋಶಿ ಗ್ರಾಮ | ಸಿ.ಸಿ.ರಸ್ತೆ, ರಸ್ತೆ ಸುಧಾರಣೆ ಮತ್ತು ಆರ್.ಸಿ.ಸಿ.ಚರಂಡಿ ನಿರ್ಮಾಣ | 50.00 | ಮುಕ್ತಾಯಗೊಂಡಿದೆ |
| 14 | ರಾಯಬಾಗ | ಜಾಗನೂರ | ಸಿ.ಸಿ.ರಸ್ತೆ ಮತ್ತು ಚರಂಡಿ ನಿರ್ಮಾಣ. | 20.00 | ಮುಕ್ತಾಯಗೊಂಡಿದೆ |
| 15 | ರಾಯಬಾಗ | ಮಹಮದಾಪೂರ ಕೆ.ಕೆ | ಸಿ.ಸಿ.ರಸ್ತೆ ಮತ್ತು ಚರಂಡಿ ನಿರ್ಮಾಣ. | 15.00 | ಮುಕ್ತಾಯಗೊಂಡಿದೆ |
| 16 | ಅಥಣಿ | ಐಗಳಿ | ಸಿ.ಸಿ. ರಸ್ತೆ ನಿರ್ಮಾಣ. | 10.00 | ಮುಕ್ತಾಯಗೊಂಡಿದೆ |
| 17 | ಅಥಣಿ | ಶಂಕರಹಟ್ಟಿ | ಸಿ.ಸಿ. ರಸ್ತೆ ನಿರ್ಮಾಣ. | 12.00 | ಮುಕ್ತಾಯಗೊಂಡಿದೆ |
| 18 | ಅಥಣಿ | ಅರಟಾಳ | ಸಿ.ಸಿ ರಸ್ತೆ ಮತ್ತು ಆರ್.ಸಿ.ಸಿ. ಚರಂಡಿ ನಿರ್ಮಾಣ. | 12.00 | ಮುಕ್ತಾಯಗೊಂಡಿದೆ |
| 19 | ಅಥಣಿ | ಯಲಿಹಡಗಲಿ | ಸಿ.ಸಿ. ರಸ್ತೆ ಮತ್ತು ಪೈಪ್ ಲೈನ್ ಮಾಡಿ ಜಲಕುಂಭ ನಿರ್ಮಾಣ | 10.00 | ಮುಕ್ತಾಯಗೊಂಡಿದೆ |
| 20 | ಅಥಣಿ | ಹುಲಳ್ಳಿ | ಸಿ.ಸಿ. ರಸ್ತೆ ಮತ್ತು ಪೈಪ್ ಲೈನ್ ಮಾಡಿ ಜಲಕುಂಭ ನಿರ್ಮಾಣ | 12.00 | ಪ್ರಗತಿಯಲ್ಲಿದೆ |
| 21 | ಅಥಣಿ | ಕೊಟ್ಟಲಗಿ | ಸಿ.ಸಿ ರಸ್ತೆ ಹಾಗೂ ಸಿ.ಸಿ ಚರಂಡಿ ನಿರ್ಮಾಣ | 12.00 | ಪ್ರಗತಿಯಲ್ಲಿದೆ |
| 22 | ಅಥಣಿ | ಕಕಮರಿ | ಸಿ.ಸಿ. ರಸ್ತೆ ಮತ್ತು ಪೈಪ್ ಲೈನ್ ಮಾಡಿ ಜಲಕುಂಭ ನಿರ್ಮಾಣ | 10.00 | ಮುಕ್ತಾಯಗೊಂಡಿದೆ |
| 23 | ಅಥಣಿ | ಕೊಕಟನೂರ | ಸಿ.ಸಿ. ರಸ್ತೆ ಹಾಗೂ ಎರಡು ಬಾಜು ಚರಂಡಿ ನಿರ್ಮಾಣ. | 10.00 | ಮುಕ್ತಾಯಗೊಂಡಿದೆ |
| 24 | ಅಥಣಿ | ಘಟನಟ್ಟಿ | ಸಿ.ಸಿ ರಸ್ತೆ ನಿರ್ಮಾಣ. | 12.00 | ಮುಕ್ತಾಯಗೊಂಡಿದೆ |
| 25 | ಅಥಣಿ | ಅಥಣಿ ಪುರಸಭೆ ವಾರ್ಡ್ ನಂ. 09, 10, 11, 18, 21 ಮತ್ತು 25 | ಸಿ.ಸಿ.ರಸ್ತೆ ಮತ್ತು ಚರಂಡಿ ನಿರ್ಮಾಣ. | 54.71 | ಮುಕ್ತಾಯಗೊಂಡಿದೆ |
| 26 | ಅಥಣಿ | ಮುರಗುಂಡಿ | ಸಿ.ಸಿ.ರಸ್ತೆ ಮತ್ತು ಚರಂಡಿ ನಿರ್ಮಾಣ. | 15.00 | ಪ್ರಾರಂಭಿಸಬೇಕಿದೆ |
| 27 | ಅಥಣಿ | ಮಸರಗುಪ್ಪಿ | ಸಿ.ಸಿ.ರಸ್ತೆ ಮತ್ತು ಚರಂಡಿ ನಿರ್ಮಾಣ. | 20.00 | ಪ್ರಾರಂಭಿಸಬೇಕಿದೆ |
| 28 | ಅಥಣಿ | ತೆಲಸಂಗ | ಸಿ.ಸಿ.ರಸ್ತೆ ನಿರ್ಮಾಣ. | 7.00 | ಮುಕ್ತಾಯಗೊಂಡಿದೆ |
| 29 | ಅಥಣಿ | ಶೇಗುಣಸಿ | ಸಿ.ಸಿ.ರಸ್ತೆ ನಿರ್ಮಾಣ. | 10.00 | ಮುಕ್ತಾಯಗೊಂಡಿದೆ |

